ಪ್ರತಿಭಾ ಗ್ರಂಥಮಾಲೆ, ಧಾರವಾಡ ವರ್ಷ ೪ — ಕಿರಣ ೨

# ಕಾಲಯಾನ

## ( ವಿಜ್ಞಾನಯುಗದ ಸಮಾಜ ಚಿತ್ರ )



" ಭಾರತೀಸುತ " ಕೊಡಗು



ಮಾರ್ಚ ೧೯೪೭



ಬೆಲೆ ೧–೧೦–೦

# ಅರಿಕೆ

ಇದೊಂದು ಹೊಸಬಗೆಯ ಕೃತಿ. ಭವಿಷ್ಯದ ಬಸಿರನ್ನು ಹೊಕ್ಕು ಹತ್ತು ಶತಮಾನಗಳ ಮುಂದಿನ ಮಾನವ ಸಮಾಜದ ಇರವನ್ನು ಚಿತ್ರಿಸಲು ನಾನು ಇಲ್ಲಿ ಹವಣಿಸಿದೇನೆ. ಈ ಪ್ರಯತ್ನ ಎಷ್ಟರ ಮಟ್ಟಿಗೆ ಸಫಲವಾಗಿದೆ ಎಂದು ನಿರ್ಣಯಿಸುವ ಕೆಲಸ ಸಹೃದಯರಾದ ವಿಮರ್ಶಕರದು.

ಇಂಗ್ಲಿಷ್ ಅರಿತವರು ಎಚ್. ಜಿ. ವೆಲ್ಸರ "Time Machine" ಎಂಬ ಕೃತಿಯನ್ನು ಓದಿರಬಹುದು. ಅವರ "ಕಾಲಯಂತ್ರ" ವನ್ನೇ, ಕಾಲ ಸಾಗರವನ್ನು ಹಾಯಲು ನಾನು ಬಳಿಸಿಕೊಂಡಿದೇನೆ. ಅಂದ ಮಾತ್ರಕ್ಕೆ ಇದು "Time Machine" ನ ರೂಪಾಂತರವೆಂದು ಯಾರೂ ಭಾವಿಸಲಾಗದು. ಇದು ಅದಕ್ಕಿಂತಲೂ ವಿಭಿನ್ನವೆನಿಸಿದ ಸ್ವತಂತ್ರ ಕೃತಿಯಾಗಿದೆ. ಈ ಎರಡು ಕೃತಿಗಳನ್ನೂ ಓದುವವರಿಗೆ ಈ ಸಂಗತಿ ಅರಿವಾಗದೆ ಇರದು.

ಈ ಪುಸ್ತಕಕ್ಕೊಂದು ಮುನ್ನುಡಿ ಬರೆಯಲೊಪ್ಪಿದ ಶ್ರೀ. ಬಿ. ಶಂಕರ ಭಟ್ಟರಿಗೆ ನಾನೆಷ್ಟು ವಂದಿಸಿದರೂ ಸಾಲದು. ಸುಪ್ರಸಿದ್ಧ ವಿಮರ್ಶಕರೂ ವಿದ್ವಾಂಸರೂ ಆದ ಅವರ ಮುನ್ನುಡಿ ಈ ಗ್ರಂಥಕ್ಕೆ ಒಂದು ತೊಡವೇ ಸರಿ.

ತಮ್ಮ ಗ್ರಂಥಮಾಲೆಯ ಒಂದು ಕುಸುಮವಾಗಿ ಪ್ರೋಣಿಸಲೊಪ್ಪಿ ಈ ಗ್ರಂಥವನ್ನು ಬೆಳಕಿಗೆ ತಂದ ಶ್ರೀ. ಘಾಣೇಕರರಿಗೆ ನಾನು ಋಣಿಯಾಗಿದೇನೆ. ಅವರ ಪ್ರಯತ್ನದ ಫಲವಾಗಿಯೇ "ಕಾಲಯಾನ" ಓದುಗರ ಕೈಸೇರುವಂತಾಗಿದೆ.

**ವೀರರಾಜಪೇಟೆ**

ಭಾ—ಸು.

೫—೩—೧೯೪೭

# ಎರಡು ಮಾತು

---

ಸಾಹಿತ್ಯವು ಜನತೆಯ ಹೃದಯದಲ್ಲಿ ವಿವಿಧ ರಸಭಾವಗಳನ್ನಷ್ಟೇ ಕೆರಳಿಸಿದರೆ ಸಾಲದು. ಇಂದಿನ ಸಾಹಿತ್ಯದಿಂದ ನಾವು ಅದಕ್ಕಿಂತಲೂ ಹೆಚ್ಚಿನ ಫಲವನ್ನು ಬಯಸುತ್ತೇವೆ. ಜನತೆಯ ಹೃದಯವನ್ನು ಕೆರಳಿಸಿ ಕಲ್ಪನೆಯ ದಾರಿಯಲ್ಲಿ ಮುಂದೆ ನಡೆಯಿಸಿ ಜೀವನದ ಗುರಿ ಮುಟ್ಟಿಸುವುದೇ ಸಾಹಿತ್ಯದ ಉದ್ದೇಶವಾಗಬೇಕು; ಎಂದರೆ ನಮ್ಮ ಸಾಹಿತ್ಯ ಓದುಗರಲ್ಲಿ ಹೊಸ ಹೊಸ ವಿಚಾರಗಳನ್ನುಂಟುಮಾಡುವ ಶಕ್ತಿಯುಳ್ಳದ್ದಾಗಬೇಕು. ಆದುದರಿಂದ ವಿಚಾರದಲ್ಲಿ ಕ್ರಾಂತಿಯನ್ನುಂಟುಮಾಡುವ ಸಾಹಿತ್ಯವೇ ನಮಗೀಗ ಬೇಕಾಗಿದೆ ಎನ್ನಬಹುದು. ನಮ್ಮ ಕತೆ-ಕಾದಂಬರಿ ನಾಟಕಗಳೇ ಮೊದಲಾದ ಸಾಹಿತ್ಯದ ವಿವಿಧ ಪ್ರಕಾರಗಳು ಜನಜೀವನದ ಚಿತ್ರಣ, ಸಾಮಾಜಿಕ ಕುರೀತಿಗಳ ಕಡು ಟೀಕೆ ಮೊದಲಾದುವುಗಳನ್ನಷ್ಟೆ ಉದ್ದೇಶವಾಗಿಟ್ಟುಕೊಂಡು ಮುಂದುವರಿದರೆ ಸಾಲದು. ಇಂದು ನಮಗೆ ವಿಚಾರ ಕ್ರಾಂತಿಯೇ ಅವುಗಳ ಗುರಿಯಾಗಿರಬೇಕು. ಪಶ್ಚಿಮದ ಭಾಷೆಗಳಲ್ಲಿರುವಂತೆ ಸಾಹಿತ್ಯದ ವಿವಿಧ ಪ್ರಕಾರಗಳು ಇನ್ನೂ ನಮ್ಮ ನುಡಿಯಲ್ಲಿ ಪ್ರಚಲಿತವಾಗಿಲ್ಲ. ಗೆಳೆಯ ಭಾರತೀಸುತರ ಈ ಕಲ್ಪನಾಕೃತಿ ಕನ್ನಡಕ್ಕೆ ಹೊಸತೆನಿಸಿದ ಸಾಹಿತ್ಯ ಪ್ರಕಾರವಾಗಿದೆ. ಓದುಗರ ಮನಸ್ಸಿನಲ್ಲಿ ವಿಚಾರ ಕ್ರಾಂತಿಯುಂಟು ಮಾಡುವ ಶಕ್ತಿ ಹೊಸ ಬಗೆಯ ಈ ಕೃತಿಯಲ್ಲಿ ಅಡಕವಾಗಿದೆ ಎಂಬುದರಲ್ಲಿ ಸಂಶಯವಿಲ್ಲ. ಭಾರತೀಸುತರು ತಮ್ಮ ಸ್ವಂತ ಕಲ್ಪನೆಗಳ ಮೂಲಕ ಓದುಗರ ಮನಸ್ಸಿನಲ್ಲಿಯೂ ಹೊಸ ಹೊಸ ಕಲ್ಪನೆಗಳುಂಟಾಗಲು ಎಡೆಮಾಡಿ ಕೊಟ್ಟಿದ್ದಾರೆ. ವಿಚಾರ ಕ್ರಾಂತಿಯ ಮೂಲಕ ನಮ್ಮ ಸಮಾಜದ ಜೀವನವು ಮೇಲ್ಮಟ್ಟಕ್ಕೇರಿ ನಿಜವಾದ ಗುರಿ ಸಾಧಿಸುವುದು. ಸಮಾಜದ ಜೀವನವು ಸಫಲತಾಪೂರ್ವಕವಾಗಿ ಗುರಿ ಸಾಧಿಸಿದರೆ ರಾಷ್ಟ್ರವೂ ಮುಂದುವರಿಯಿತೆನ್ನಬಹುದು. ಆದುದರಿಂದ ಸಾಹಿತ್ಯದ ಮೂಲಕ ರಾಷ್ಟ್ರದ ವಿವಿಧಾಂಗಗಳಲ್ಲಿಯೂ ಕ್ರಾಂತಿಯನ್ನುಂಟು ಮಾಡಿ ಜೀವನದ ಗುರಿ ಮುಟ್ಟಿಸುವುದೇ ಇಂದಿನ ಸಾಹಿತಿಗಳ ಮುಖ್ಯ ಉದ್ದೇಶವಾಗಿರಬೇಕು. ಈ ಸದುದ್ದೇಶವನ್ನೇ ದೃಷ್ಟಿಯಲ್ಲಿರಿಸಿಕೊಂಡು ಗೆಳೆಯ ಭಾರತೀಸುತರು ಈ ಕೃತಿ ಕಟ್ಟಿದ್ದಾರೆ.

ಇನ್ನೀಗ ಈ ಕೃತಿ ಸಾಹಿತ್ಯದಲ್ಲಿ ಯಾವ ಪ್ರಕಾರಕ್ಕೆ ಸೇರಿದೆ ಎಂಬುದನ್ನಷ್ಟು ಪರಿಶೀಲಿಸುವ. 'ಉಟೋಪಿಯಾ' ಎಂಬುದು ಪಾಶ್ಚಿಮಾತ್ಯ ಭಾಷೆಗಳಲ್ಲಿ ಸಾಹಿತ್ಯದ ಒಂದು ಪ್ರಕಾರವಾಗಿದೆ. ಉಟೋಪಿಯಾ ಎಂಬ ಪದಕ್ಕೆ ಕಲ್ಪನಾ ಪ್ರಪಂಚವೆಂದು ಅರ್ಥವಾಗುತ್ತದೆ. ನಾವಿದನ್ನೇ ಹಗಲುಗನಸೆಂದೂ ಕರೆಯಬಹುದು ಲೇಖಕನು ತನ್ನ ಮನಸ್ಸಿನಲ್ಲಿ ಕಲ್ಪನಾ ಪ್ರಪಂಚವೊಂದನ್ನು ಸೃಷ್ಟಿಸಿಕೊಂಡು, ಆ ಕಲ್ಪನಾ ಪ್ರಪಂಚದ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕವೇ ಮೊದಲಾದ ವಿವಿಧ ಪರಿಸ್ಥಿತಿಗಳನ್ನು ಸುಸ್ಪಷ್ಟವಾಗಿ ಬರೆಹದ ಮೂಲಕ ಚಿತ್ರಿಸುವುದೇ 'ಉಟೋಪಿಯಾ'. ಇಂಗ್ಲೆಂಡಿನಲ್ಲಿ ಏಳನೆಯ ಹೆನ್ರಿಯ ಕಾಲದಲ್ಲಿ (೧೪೭೮–೧೫೩೫) ಪ್ರಧಾನಾಮಾತ್ಯನಾಗಿದ್ದ ಸರ್ ಥಾಮಸ್ ಮೋರ್ ಎಂಬ ಸುಪ್ರಸಿದ್ಧ ವಿಚಾರಕನೇ ಮೊದಲನೆಯ 'ಉಟೋಪಿಯಾ' ಕರ್ತನು. ಅಂದಿನ ಶಾಸಕ ವರ್ಗವು ದಲಿತ ಪ್ರಜಾ ವರ್ಗವನ್ನು ಎದೆ ಮೆಟ್ಟಿ ನರ್ತಿಸಿದುದರಿಂದುಂಟಾದ ಭೀಷಣ ದಾರಿದ್ರ್ಯದ ಚಿತ್ರವನ್ನು ಕಂಡು ಎದೆ ಕರಗಿದ ಸರ್ ಥಾಮಸ್ ಮೋರನ ಕಲ್ಪನೆಯಲ್ಲಿ ಮೊದಲನೆಯ ಉಟೋಪಿಯಾ ರೂಪುಗೊಂಡು ಕೃತಿ ರೂಪದಲ್ಲಿ ಹೊರಬಿದ್ದಿತು. ಈ ಪ್ರಥಮ ಉಟೋಪಿಯಾಕಾರನು ಪೋರ್ಚುಗೀಸ್ ನಾವಿಕ ರಾಫೆಲ್ ಹೆಥ್‌ಲೋಡೆ ಎಂಬ ತನ್ನ ಕಲ್ಪಿತ ವ್ಯಕ್ತಿಯ ಬಾಯಿಯಿಂದ 'ಉಟೋಪಿಯಾ' (ಎಲ್ಲಿಯೂ ಏನೂ ಇಲ್ಲ) ದ್ವೀಪದ ಬಣ್ಣನೆ ಮಾಡಿಸುವನು 'ಉಟೋಪಿಯಾ' ಎಂದು ಹೆಸರಿಸಿದ ಈ ದ್ವೀಪವು ಸಂಪೂರ್ಣ ಸಾಮ್ಯವಾದೀ ದೃಷ್ಟಿಯಿಂದ ಕಲ್ಪಿತವಾಗಿದೆ. "ಅಧಿಕ ಜನಕ್ಕೆ ಅಧಿಕ ಆನಂದ" ಎಂಬುದೇ ಥಾಮಸ್ ಮೋರನ ಉಟೋಪಿಯಾದ ಮುಖ್ಯ ತತ್ವವಾಗಿದೆ. ಹೀಗೆ ಸರ್ ಥಾಮಸ್ ಮೋರನ ಈ ಕಲ್ಪಿತ ಚಿತ್ರದಿಂದ ಪಾಶ್ಚಿಮಾತ್ಯ ಭಾಷೆಗಳಲ್ಲಿ ಉಟೋಪಿಯಾ ಎಂಬ ಸಾಹಿತ್ಯದ ಪ್ರಕಾರವು ಮೊದಲಾಯಿತೆನ್ನಬಹುದು.

ಸರ್ ಥಾಮಸ್ ಮೋರನ ಪ್ರಥಮ ಉಟೋಪಿಯಾದಿಂದ ಮತ್ತೆ ಯುರೋಪಿನಲ್ಲಿ ರಚಿತವಾದ 'ಉಟೋಪಿಯಾ' ಕೃತಿ ರಾಣಿ ಎಲಿಜಬೆತ್ತಳ ಕಾಲದ (೧೫೬೧–೧೬೨೬)ಲ್ಲಿ ಜೀವಿಸಿದ್ದ ಸುಪ್ರಸಿದ್ಧ ವೈಜ್ಞಾನಿಕ ಹಾಗೂ ದಾರ್ಶನಿಕವೆನಿಸಿದ ಫ್ರಾನ್ಸಿಸ್ ಬೇಕನ್ ಎಂಬಾತನ 'ನ್ಯೂ ಎಟ್ಲಾಂಟಿಸ್.' ಬೇಕನ್ನನ ಕಾಲದಲ್ಲಿ ಭೌಗೋಲಿಕ ವೈಜ್ಞಾನಿಕ ಅನುಸಂಧಾನಗಳು ರಭಸದಿಂದ

ತೊಡಗಿದ್ದುವು. ಆದುದರಿಂದಲೇ ಈತನ 'ಉಟೋಪಿಯಾ'ದಲ್ಲಿ ವೈಜ್ಞಾನಿಕ ಸತ್ಯಗಳ ಗವೇಷಣವು ಸಮರ್ಥಿತವಾಗಿದೆ. ಸಾಮ್ಯವಾದೀ ಅರ್ಥನೀತಿಯ ವಿವರಣೆಯು ಬೇಕನ್ನನ ಉದ್ದೇಶವಲ್ಲ; ಈತನು ವೈಜ್ಞಾನಿಕ ಸಾಮ್ಯವಾದವನ್ನು ಸಮರ್ಥಿಸುವವನಲ್ಲದೆ ಸಾಂಪತ್ತಿಕ ಸಾಮ್ಯವಾದದ ಸಮರ್ಥಕನಾಗಿರಲಿಲ್ಲ. ಆದುದರಿಂದಲೇ ಇವನ 'ನ್ಯೂ ಎಟ್ಲಾಂಟಿಸ್'ನಲ್ಲಿ ವೈಜ್ಞಾನಿಕ ಸಾಮ್ಯವಾದದ ಕಲ್ಪನಾ ಚಿತ್ರವು ರೂಪುಗೊಂಡಿತು. 'ನ್ಯೂ ಎಂಟ್ಲಾಂಟಿಸ್'ನಿಂದ ಮತ್ತೆ ಪ್ರಸಿದ್ಧವಾದ 'ಉಟೋಪಿಯಾ' ಕೃತಿಯೆಂದರೆ ಹದಿನಾರನೆಯ ಶತಮಾನದಲ್ಲಿ ಜರ್ಮನಿಯಲ್ಲಿ ರಚಿತವಾದ 'ಕ್ರೈಸ್ತಪುರಿ' ಮತ್ತು ಇಟಲಿಯಲ್ಲಿ ರಚಿತವಾದ 'ಸೂರ್ಯಪುರಿ'—ಇವೇ ಎರಡು ಕೃತಿಗಳಾಗಿವೆ. ಇವೆರಡು ಕಲ್ಪನಾ ಚಿತ್ರಗಳೂ ಸಂಪೂರ್ಣ ಸಾಮ್ಯವಾದೀ ದೃಷ್ಟಿಯಿಂದಲೇ ರಚಿತವಾದುವು. ಐರೋಪ್ಯ ಸಾಹಿತ್ಯಗಳಲ್ಲಿ ಇನ್ನೂ ಹಲವಾರು 'ಉಟೋಪಿಯಾ'ಗಳ ರಚನೆಯಾದರೂ ಅಷ್ಟೊಂದು ಸುಸ್ಪಷ್ಟವಾಗಿ ಚಿತ್ರಿತವಾಗದಿರುವ ಕಾರಣದಿಂದ ಪ್ರಸಿದ್ಧವೂ ಆಗಲಿಲ್ಲವೆನ್ನಬಹುದು.

ಭಾರತೀಯ ಭಾಷೆಗಳಲ್ಲಿ ರಚಿತವಾದ ಮೊದಲನೆಯ 'ಉಟೋಪಿಯಾ' ಕೃತಿಯೆಂದರೆ ಹಿಂದಿಯಲ್ಲಿ ಬರೆಯಲ್ಪಟ್ಟ ಮಹಾಪಂಡಿತ ರಾಹಲ ಸಾಂಕೃತ್ಯಾಯನರ 'ಬಾಯಿಸವೀಂ ಸದೀ' (೨೨ನೆಯ ಶತಮಾನ) ಎನ್ನಬಹುದು. 'ಬಾಯಿಸವೀಂ ಸದೀ' ಎಂಬ ಈ ಪ್ರಥಮ ಭಾರತೀಯ ಉಟೋಪಿಯಾದ ರಚನೆ ೧೯೧೮ನೆಯ ಇಸವಿಯಲ್ಲಿ ತೊಡಗಿದ್ದರೂ ಇದು ಪುಸ್ತಕ ರೂಪದಲ್ಲಿ ಪ್ರಕಟವಾದುದು ೧೯೩೪ನೆಯ ವರ್ಷದಲ್ಲಿ ಎಂದು ಶ್ರೀ ರಾಹುಲಜೀಯವರೇ ಒಂದೆಡೆ ಹೇಳಿದ್ದಾರೆ. ೨೨ನೆಯ ಶತಮಾನದ ಹಿಂದುಸ್ತಾನವನ್ನು ಕ್ಷೇತ್ರವಾಗಿರಿಸಿಕೊಂಡು ಸಾಮ್ಯವಾದೀ ದೃಷ್ಟಿಯಿಂದ ರಾಷ್ಟ್ರದ ವಿವಿಧಾಂಗಗಳ ವಿವರಣೆಯನ್ನು ರಾಹುಲಜೀಯವರು ಕಲ್ಪಿಸಿ ಚಿತ್ರಿಸಿದ್ದಾರೆ. ಇವರ ಈ ಕಲ್ಪನಾ ಕೃತಿಗೆ ಹಿಂದುಸ್ತಾನವೇ ಕ್ಷೇತ್ರವಾದರೂ ೨೨ನೆಯ ಶತಮಾನ ಅಖಿಲ ಪ್ರಪಂಚದ ಪರಿಸ್ಥಿತಿಯೂ ಅದರಲ್ಲಿ ಅಡಕವಾಗಿದೆ. ಉಟೋಪಿಯಾದಲ್ಲಿರಬೇಕಾದ ಗುಣಗಳೆಲ್ಲವನ್ನೂ ನಾವೀ ಕೃತಿಯಲ್ಲಿ ಕಾಣಬಹುದು.

ನಮ್ಮ ಕನ್ನಡಕ್ಕಂತೂ ಉಟೋಪಿಯಾ ಸಾಹಿತ್ಯ ಹೊಚ್ಚಹೊಸತು. ಗೆಳೆಯ ಭಾರತೀಸುತರು ಈ ಕೊರತೆಯನ್ನು ಕಂಡು ಕನ್ನಡ ಭಾಷೆಯಲ್ಲಿಯೇ

ಮೊದಲನೆಯ 'ಉಟೋಪಿಯಾ' ಎನ್ನಿಸುವ ಈ 'ಕಾಲಯಾನ'ವನ್ನು ಕನ್ನಡಿಗರ ಮುಂದೆ ನಡೆಯಿಸಿದ್ದಾರೆ. ಅಖಿಲ ಭೂಗೋಲವೇ ಈ ಕಲ್ಪನಾ ಚಿತ್ರದ ಕ್ಷೇತ್ರವಾದರೂ ಲೇಖಕರು ಮಂಗಲಗ್ರಹವನ್ನೂ ಇಲ್ಲಿ ಸೆಳೆದುಕೊಂಡಿದ್ದಾರೆ. ಉಟೋಪಿಯಾದಲ್ಲಿರಬೇಕಾದ ಮುಖ್ಯ ಗುಣವೆಂದರೆ ಸುಸ್ಪಷ್ಟತೆ ಮತ್ತು ಸಂಭವನೀಯತೆ. ಯಾವ ಉಟೋಪಿಯಾ ಕೃತಿಯೇ ಆಗಲೀ ಅದು ಸುಸ್ಪಷ್ಟವಾಗಿಯೂ ಸಂಭವನೀಯವಾಗಿಯೂ ಚಿತ್ರಿತವಾಗದಿದ್ದರೆ ಸಫಲವೆನಿಸಲಾರದು. ಭಾರತೀಸುತರ ಈ ಕೃತಿಯಲ್ಲಿ ಇವೆರಡು ಗುಣಗಳೂ ಪರಿಪೂರ್ಣವಾಗಿವೆ ಎನ್ನಬಹುದು. ಇವರ ಕಲ್ಪನೆಯಂತೆ ಬಂಡವಾಳವಾದೀ ಯುಗ ಕಳೆದೊಡನೆಯೇ ಸಾಮ್ಯವಾದೀ ಯುಗ ಅಥವಾ ಜನತಾ ಯುಗ ಕಾಲಿರಿಸುವುದು. ಜನತಾ ಯುಗವನ್ನು ಮೆಟ್ಟಿ ಮುಂದೆ ಹೆಜ್ಜೆ ಇರಿಸಿದ ಯುಗವೇ ವೈಜ್ಞಾನಿಕ ಯುಗ. ವೈಜ್ಞಾನಿಕರ ಅಧಿಕಾರಕ್ಕೊಳಗಾದ ೧೦ ಶತಮಾನಗಳ ಮುಂದಿನ ಮಾನವ ಸಮಾಜದ ಸುಸ್ಪಷ್ಟವಾದ ಚಿತ್ರವನ್ನು ನಾವೀ 'ಕಾಲಯಾನ'ದಲ್ಲಿ ಕಾಣಬಹುದು. ಎಚ್. ಜಿ. ವೆಲ್ಸರ Time mechne ಎಂಬುದು ಈ ಕಾಲಯಾನಕ್ಕೆ ಆಧಾರ ಕೃತಿಯಾದರೂ ಎಲ್ಲಾ ವಿಧದಿಂದಲೂ ಇದು ಸ್ವತಂತ್ರವಾದ ಕಲ್ಪನಾ ಚಿತ್ರವಾಗಿದೆ ಎಂದು ಲೇಖಕರೇ ಹೇಳಿಕೊಂಡಿದ್ದಾರೆ. ವೈಜ್ಞಾನಿಕರ ಸರ್ವಾಧಿಕಾರಕ್ಕೊಳಗಾಗಿ ಅವರ ಕೈಗೊಂಬೆಯಂತಾದ ಮುಂದಿನ ಮಾನವ ಸಮಾಜವು ಎಂತಿರಬಹುದೆಂಬ ಭಾರತೀಸುತರ ಕಲ್ಪನೆ ಸಂಭವನೀಯವಾಗಿಯೂ, ಸುಸ್ಪಷ್ಟವಾಗಿಯೂ ಇದೆ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. ಶ್ರೀ ಭಾರತೀಸುತರು ತಮ್ಮ ನೀಳ್ಗತೆಗಳು, ಸಣ್ಣ ಕತೆಗಳು ಮತ್ತು ಕಾದಂಬರಿಗಳ ಮೂಲಕ ಈಗಾಗಲೇ ಕನ್ನಡಿಗರಿಗೆ ಪರಿಚಿತರಾಗಿದ್ದಾರೆ. ಇವರ ಭಾಷಾಶೈಲಿಯು ಸರಳವಾಗಿ ಓಜಃಪೂರ್ಣವಾಗಿದೆ. ಶ್ರೀಯುತರ ಉಳಿದ ಕೃತಿಗಳಂತೆಯೇ ಈ ನವೀನ ಕೃತಿಯೂ ಓದುಗರ ಮನ ಸೆಳೆದು ಸ್ವೀಕಾರದಲ್ಲಿ ಹೊಸ ದಾರಿ ಮಾಡಿ ಕೊಡಬಹುದು.

ಮಂಗಳೂರು
ತಾ|| ೪—೪—೧೯೪೭

**ಬಿ. ಶಂಕರಭಟ್ಟ**

# ಕಾಲಯಾನ



೧

ಅಂದು ನಾವು ನಾಲ್ಕು ಮಂದಿ ಜನಾರ್ದನರಾಯರಲ್ಲಿಗೆ ಹರಟೆ ಹೊಡೆಯಲು ಹೋಗಿದ್ದೆವು. ರಾಯರ ಬಳಿ ಅಪರಿಚಿತ ವ್ಯಕ್ತಿಯೊಬ್ಬ ಇದ್ದ. ತೆಳ್ಳಗಿನ ಮೈ, ಉದ್ದವಾದ ಕೋಲುಮೊಗ, ಕಿಡಿಗಳನ್ನು ಕಾರುತಿರುವ ಕೆಂಗಣ್ಣುಗಳು, ಇವು ಆತನ ರೂಪವೈಶಿಷ್ಟ್ಯಗಳಾಗಿದ್ದುವು. ಆತ ಇತರರೊಡನೆ ಮಾತುಕತೆಗಳಲ್ಲಿ ಪಾಲುಗಾರನಾಗದೆ, ಸ್ವಲ್ಪ ದೂರ ಕುಳಿತಿದ್ದ. ರಾಯರೇ ಈ ಅಪರಿಚಿತನ ಪರಿಚಯವನ್ನು ನಮಗೆಲ್ಲ ಮಾಡಿಸಿದರು. "ನೋಡಿ, ಇವರು ನಮ್ಮ ಊರಿಗೆ ಹೊಸಬರು. ನಿನ್ನೆ ಬಂದಿದಾರೆ. ಇವರ ಹೆಸರು ಯಮುನಾಚಾರ್ಯರೆಂದು. ಸ್ಥಳೀಯ ಮೋಟಾರು ಸಂಸ್ಥೆಯ ಜನರಲ್ ಮೇನೇಜರರು." "ಓಹೋ ತುಂಬಾ ಸಂತೋಷ. ತಮ್ಮ ಪರಿಚಯವಾದುದು ಒಂದು ಲಾಭವೇ ಸರಿ" ನಾನು ಆಚಾರ್ಯರ ಕೈ ಹಿಡಿದು ಕುಲುಕಿದೆ.

"ಇವರು ಈ ಊರಿನ ಶಾಲೆಯ ಕನ್ನಡ ಅಧ್ಯಾಪಕರು." ಎಂದು ಜನಾರ್ದನರಾಯರು ನನ್ನ ಪರಿಚಯವನ್ನು ಯಮುನಾಚಾರ್ಯರಿಗೆ ಮಾಡಿಸಿ ಕೊಟ್ಟರು.

ರಾಯರ ಮನೆಯೊಳಗಿನಿಂದ ಚಹಾಕಪ್ಪುಗಳು ಹೊರಗೆ ದಯಮಾಡಿಸಿದುವು. ಚಹಾಪಾನ ನಮ್ಮ ನೀರಡಿಕೆಯನ್ನು ಹಿಂಗಿಸಿದುದಲ್ಲದೆ ನಮ್ಮ ಮನಸ್ಸುಗಳಿಗೂ ನವಚೇತನ ನೀಡಿತು. ಇಸ್ಪೀಟಿನ ಕಟ್ಟಿನೊಡನೆ ನಮ್ಮ ಹರಟೆಯ ಕಂತೆಯನ್ನೂ ಬಿಚ್ಚಿದೆವು. ನಮ್ಮ ಮಾತುಗಳ ಗಾಲಿಗಳು ಆಧುನಿಕ ಬರಗಾಲದ ಸಮಸ್ಯೆ, ತಾತ್ಕಾಲಿಕ ಕೇಂದ್ರ ಸರಕಾರ, ರಷ್ಯನರ ಮತ್ತು ಆಂಗ್ಲೋ ಅಮೇರಿಕನರ ಕಚ್ಚಾಟ, ಚೀನದ ಅಂತರ್ಯುದ್ಧ ಮೊದಲಾದ

ಹಲವು ಸಮಸ್ಯೆಗಳ ಮೇಲೆ ಹೊರಳಿದುವು. ಪ್ರತಿಯೊಂದು ಪ್ರಶ್ನೆಯ ಬಗ್ಗೆಯೂ ನಾವು ಆರು ಮಂದಿ ಹತ್ತು ತರದ ಅಭಿಪ್ರಾಯಗಳನ್ನು ಹೊರಗೆಡಹುತಿದ್ದೆವು. ಈ ಸಂಭಾಷಣೆಯ ಹುಚ್ಚು ಹೊಸಲಿನಲ್ಲಿ ಬಾಯಿ ಹಾಕದವರೆಂದರೆ ನಮಗೆಲ್ಲ ಹೊಸಬರೆನಿಸಿದ ಯಮುನಾಚಾರ್ಯರು. ಅವರು ನಮ್ಮ ಆಟಗಳಲ್ಲಿಯೂ ಸೇರದೆ, ದೂರದಲ್ಲಿ ಕುಳಿತು ನಮ್ಮ ಮಾತುಕತೆಗಳನ್ನು ಮೆಲುಕು ಹಾಕುತಿದ್ದರು.

"ಮನುಷ್ಯನಿಗೆ ಮುಂಬರುವ ಸಂಗತಿಗಳ ಅರಿವಿದ್ದಿದ್ದರೆ, ಮಂದಿಯ ಮತ್ತು ಜನಾಂಗಗಳ ತಲೆಗೆಡಿಸುವ ಈ ಸಮಸ್ಯೆಗಳು ಮೂಡುತ್ತಲೇ ಇರಲಿಲ್ಲ." ಕೈಯಲ್ಲಿ ಹಿಡಿದ ಪಿಡಿಯಿಂದ ಜಾಕಿಯನ್ನು ತೆಗೆದು ಹಾಕುತ್ತಾ ಗೋಪು ನುಡಿದ.

"ಅದಕ್ಕೇನು, ನಮ್ಮ ಜೋಯಿಸರನ್ನು ಕರೆದು ಅವರಿಗೊಂದು ಹೊಸ ಉದ್ಯೋಗವನ್ನು ಹಚ್ಚಿದರಾಯಿತು." ಜನಾರ್ದನರಾಯರು ಅಂದರು. "ಈಗ ವಾರಪತ್ರ ಮಾನಪತ್ರಗಳಲ್ಲಿ ರಾಶಿ ಭವಿಷ್ಯಗಳನ್ನು ಬರೆಯುವುದು ಅವರ ಕಸುಬಾಗಿದೆ. ಇನ್ನು ಮುಂದೆ ಅವರು ವಾರಪತ್ರಗಳಲ್ಲಿ ಜನಾಂಗಗಳ ಭವಿಷ್ಯವನ್ನು ಬರೆದು ಪ್ರಕಟಿಸಲಿ! ಆಗ ಜನಾಂಗಗಳೂ ಜನಾಂಗಗಳ ಮುಂದಾಳುಗಳೂ ಎಚ್ಚರಿಕೆಯನ್ನು ತೆಗೆದುಕೊಳ್ಳಬಹುದು."

"ಅಂತೂ ಜನಾಂಗಗಳ ಆಗುಹೋಗುಗಳನ್ನು ಜೋಯಿಸರ ಕೈಗೆ ಒಪ್ಪಿಸಬೇಕೆಂದಿದ್ದೀರಿ ನೀವು." ಎಂದೆ ನಾನು.

"ಮುಂಬರುವ ಸಂಗತಿಗಳನ್ನು ಅರಿಯುವುದು ಅಷ್ಟೇನೂ ಪ್ರಯಾಸವಾದುದಲ್ಲ." ಈ ತನಕ ತುಟಿ ಬಿಚ್ಚದೆ ಕುಳಿತಿದ್ದ ಯಮುನಾಚಾರ್ಯರು ನಡುವೆ ಬಾಯಿ ಹಾಕಿದರು. "ಮಾನವ ಬುದ್ಧಿ ಕಾಲದ ಮೇರೆಯನ್ನು ದಾಟಿ, ಆಚೆಗಿನದನ್ನು ಹಣಿಕಿ ನೋಡಬಲ್ಲುದು. ವರ್ತಮಾನವನ್ನು ನಾವು ಆಳಬಲ್ಲೆವಾದರೆ, ಭೂತಭವಿಷ್ಯಗಳೂ ನಮ್ಮ ಕೈಗಳಲ್ಲಿಯೇ ಇವೆ."

"ಅದಕ್ಕೆ ನಮ್ಮ ಪುರಾಣಗಳೇ ಆಧಾರವಲ್ಲವೇ? ಹಿಂದೆ ವಶಿಷ್ಠ ವಾಮದೇವ ಗೌತಮ ಮೊದಲಾದ ತ್ರಿಕಾಲಜ್ಞಾನಿಗಳು ಇದ್ದರು." ಎಂದ ಗೋಪು. "ಅವರು ಭೂತಭವಿಷ್ಯಗಳನ್ನು ಅರಿತಿದ್ದರು, ಮುಂಬರುವುದನ್ನು ಹೇಳುತಿದ್ದರು."

" ಗೊಡ್ಡು ಪುರಾಣಗಳಲ್ಲಿ ನನಗೆ ನಂಬಿಕೆಯಿಲ್ಲ " ಎಂದರು ಜನಾರ್ದನ ರಾಯರು. " ಅವು ಕಾಲುಪಾಲು ಚರಿತ್ರೆ, ಮುಕ್ಕಾಲು ಪಾಲು ಮನುಷ್ಯನ ಕಲ್ಪನೆಯ ಕಲಸುಮೇಲೋಗರ. "

" ಪುರಾಣಗಳ ಆಧಾರದಿಂದ ನಾನು ನುಡಿಯುತಲಿಲ್ಲ." ಯಮುನಾ ಚಾರ್ಯರು ಉಸುರಿದರು. " ನನ್ನ ವಾದ ಪುರಾಣಗಳ ಜಾಳಿಗೆಯಲ್ಲಿ ಸಿಲುಕಿ ನೇತಾಡುತಲಿಲ್ಲ. ಅದು ತರ್ಕಬದ್ಧವಾದುದು; ಸಯುಕ್ತಿಕವಾದುದು. "

" ಅಂದರೆ ? " ನಮ್ಮೆಲ್ಲರ ಕಣ್ಣುಗಳು ಆಚಾರ್ಯರ ಮೊಗದತ್ತ ಹೊರಳಿದುವು.

" ಈಗ ನೋಡಿ, ಕಾಲದಲ್ಲಿ ವರ್ತಮಾನ ಭೂತ ಭವಿಷ್ಯಗಳೆಂಬ ವ್ಯತ್ಯಾಸವೇ ಇಲ್ಲ. ನಮ್ಮ ತಲೆಯ ಮೇಲೆ ಹೊಳೆವ ನೀಲಿಯ ಬಾನಿನಂತೆ ಅದು ಅಖಂಡವಾದುದು. ಹೇಗೆ ನಮ್ಮ ಕಣ್ಣುಗಳು ಬಾಂದಳದ ಸಮಗ್ರ ರೂಪವನ್ನು ನಿಟ್ಟಿಸಲಾರವೋ, ಅಂತೆಯೇ ಮನುಷ್ಯನ ಬುದ್ಧಿ ಕಾಲಪುರುಷನ ಪೂರ್ಣ ಸ್ವರೂಪವನ್ನು ನೋಡಲಾರದು. ಆದುದರಿಂದಲೇ ನಮ್ಮ ದೃಷ್ಟಿಗೆ ಬೀಳುತಿರುವ ವೇಳೆಗೆ ವರ್ತಮಾನವೆಂದು ಹೆಸರಿಟ್ಟಿದೇವೆ; ನಮ್ಮ ದೃಷ್ಟಿಯಿಂದ ಮರೆಯಾದುದು ಭೂತ; ಮುಂದೆ ನಾವು ನೋಡಲಿರುವುದು ಭವಿಷ್ಯತ್ತು. "

" ನಿಜ. ಆದರೆ ಮುಂಬರುವ ಕಾಲ ಸ್ವರೂಪವನ್ನು ಅರಿಯುವ ಬಗೆ ಹೇಗೆ ? " ಎಂಬ ಪ್ರಶ್ನೆ ಜನಾರ್ದನರಾಯರ ಕೊರಳಿನಿಂದ ಹೊರಟಿತು.

" ಮನುಷ್ಯ ತಾನು ಹಾಕಿದ ಗೆರೆಗಳನ್ನು ದಾಟಿ ಆಚೆಗಿನ ಕಾಲವನ್ನು ನಿಟ್ಟಿಸಲು ಸಮರ್ಥನಾಗಬೇಕು. ಆಗ ಭೂತ ಭವಿಷ್ಯಗಳು ಮನುಷ್ಯನ ಅಳವಿಗೆ ನಿಲುಕುವುವು. " ಆಚಾರ್ಯರೆಂದರು " ಆದರೆ ಅದು ಹೇಗೆಂಬುದನ್ನು ನಾನು ತಿಳಿದಿದ್ದರೆ ಕಾಲವನ್ನತಿಕ್ರಮಿಸಿ ತ್ರಿಕಾಲಜ್ಞನಾಗುತಿದ್ದೆ. "

" ನೀವು ನುಡಿಯುವುದು ಕಲ್ಪನೆ ನಾಡಿನ ಮೊಗ್ಗು. " ಗೋಪುವಿನ ಮೊಗದಲ್ಲಿ ನಗೆಯು ಹೂ ಅರಳಿತು. " ಆದರೆ ನಿಮ್ಮ ಕನಸು ಯಥಾರ್ಥ ವಾಗದು. ಮುಂಬರುವುದನ್ನು ಅರಿಯಬೇಕಾದರೆ ರಾಯರೆಂದಂತೆ ಜೋಯಿ ಸರೇ ಗತಿ. "

" ಈಗ ಒಂದು ಶತಮಾನದ ಹಿಂದೆ ಮನುಷ್ಯ ಆಕಾಶದಲ್ಲಿ ಹಾರಬಲ್ಲ ನೆಂದು ನುಡಿದಿದ್ದರೆ ಅದು ಕಲ್ಪನೆಯ ಕುಸುಮವೆಂದು ಅಣಕಿಸುತಿದ್ದರು, "

ಗಂಭೀರ ದನಿಯಲ್ಲಿ ಆಚಾರ್ಯರು ಮಾತು ಮುಂದುವರಿಸಿದರು. "ಆದರೆ ಈಗ ಅದು ಒಂದು ಯಥಾರ್ಥವೆನಿಸಿದೆ. ನಮಗೆಲ್ಲ ಅದೊಂದು ಸತ್ಯವಾಗಿದೆ. ಅದರಂತೆಯೇ ಮನುಷ್ಯ ಕಾಲವನ್ನತಿಕ್ರಮಿಸಬಲ್ಲನೆಂದರೆ ಅದೊಂದು ಕಲ್ಪನೆಯೆಂದು ಈಗ ಜನರು ಮೊಗ ತಿರುವಿಸುವರು. ಆದರೆ ಮುಂದೆ ಒಂದೆರಡು ಶತಮಾನಗಳಲ್ಲಿ ಅದೂ ಸಹ ಒಂದು ಯಥಾರ್ಥವಾಗಿ ಪರಿಣಮಿಸಬಹುದು. ಇಂದಿನ ಕಲ್ಪನೆ ನಾಳೆ ದಿನದ ಯಥಾರ್ಥದ ಮೊಳಕೆಯಾಗಿದೆ ಎಂಬುದನ್ನು ಮರೆಯಲಾಗದು."

ಇಂತು ಆಚಾರ್ಯರ ಪರಿಚಯವೆನಗಾಯಿತು. ಅವರ ಮಾತುಗಳಿಗೆ ಒಂದು 'ವಾದ'ವೆಂದಲ್ಲದೆ ಅದಕ್ಕಿಂತ ಹೆಚ್ಚಿನ ಬೆಲೆಯನ್ನು ಅಂದು ನಾವಾರೂ ಕೊಟ್ಟಿರಲಿಲ್ಲ.

ತಿಂಗಳುಗಳು ಒಂದೆರಡು ಸಾಗಿದುವು. ಆಚಾರ್ಯರ ಭಾಷೆಯಲ್ಲಿ ಹೇಳುವುದಾದರೆ ಕಾಲಪಥದಲ್ಲಿ ಅಷ್ಟು ದೂರ ಮುನ್ನಡೆದೆವು. ಈ ದಿನಗಳಲ್ಲಿ ನನಗೂ ಆಚಾರ್ಯರಿಗೂ ನಡುವೆ ಸಾಕಷ್ಟು ಮೈತ್ರಿ ಬೆಳೆದಿತ್ತು. ಅವರ ಸರಳತನದ ನಡತೆ, ತೀಕ್ಷ್ಣಬುದ್ಧಿಯ ಹರಿತವಾದ ನೋಟ, ನಗೆಮಾತುಗಳು ಇವೆಲ್ಲ ನನಗೆ ಒಗ್ಗಿದುವು. ಅವರೊಡನೆ ಸ್ನೇಹ ಬೆಳೆದಂತೆ, ನನಗೆ ಅವರಲ್ಲಿ ಗೌರವಾದರಗಳುಂಟಾದುವು. ಅವರ ಅರಿವು ಮತ್ತು ಸಂಸ್ಕಾರಗಳು ನನಗಿಂತಲೂ ಮೇಲಿನ ನೆಲೆಯವು ಎಂದು ನನಗೆ ಅನುಭವವಾಗತೊಡಗಿತು.

ಆಚಾರ್ಯರ ಪರಿಚಯದೊಡನೆ ಅವರ ಗತಜೀವನದ ಮಾಹಿತಿಗಳೂ ಸಾಕಷ್ಟು ದೊರಕಿದುವು. ಅವರು ಸೇಲಂ ಕಡೆಯ ಕನ್ನಡಿಗರು. ವಿದ್ಯಾಪೀಠದ ಉಚ್ಚ ತರಗತಿಯ ಬಿರುದನ್ನು ಪಡೆದವರವರು. ಯಾಂತ್ರಿಕ ವಿಜ್ಞಾನದಲ್ಲಿ ಪಾರಂಗತರಾಗಿ ಅವರು ಕೊರಳಲ್ಲಿ ನಾಲ್ಕಾರು ಬಿರುದುಗಳ ಮಾಲಿಕೆಯನ್ನು ಆಂತಿದ್ದರು. ಹಿಂದೆ ಉತ್ತರ ಭಾರತದಲ್ಲಿ ಆವುದೋ ಒಂದು ಇಂಜನಿಯರಿಂಗ್ ಸಂಸ್ಥೆಯಲ್ಲಿ ಇಂಜನಿಯರಾಗಿ ನಾಲ್ಕು ಅಂಕೆಗಳ ಸಾಲಿನ ಸಂಬಳ ಗಳಿಸುತಿದ್ದರಂತೆ. ಕೆಲಕಾಲದ ಅನಂತರ ಯಾವುದೋ ಒಂದು ಕಾರಣದ ಸಲುವಾಗಿ ತಮ್ಮ ಉದ್ಯೋಗವನ್ನು ತ್ಯಜಿಸಿ ದಕ್ಷಿಣ ದೇಶಕ್ಕೆ ಬಂದರು. ಆ ಕಾರಣವೇನೆಂಬುದು ನನಗೆ ತಿಳಿಯದು. ಆಚಾರ್ಯರನ್ನು ಕೇಳಿ ತಿಳಿದುಕೊಳ್ಳುವ ಹವ್ಯಾಸಕ್ಕೂ ನಾನು ಬೀಳಲಿಲ್ಲ. ಒಂದೆರಡು ವರುಷ ಹಿಮಾಚಲದಿಂದ ಹಿಡಿದು ಕನ್ಯಾಕುಮಾರಿಯ ವರೆಗೆ ಅಲೆವುದರಲ್ಲಿ ಕಳೆದಿದ್ದ

ರಂತೆ. ಕೊನೆಗೆ ಅವರ ಹತ್ತಿರದ ಬಂಧುಗಳೊಬ್ಬರು ನಮ್ಮೂರ ಮೋಟಾರು ಇಂಜನಿಯರಿಂಗ್ ಸಂಸ್ಥೆಯಲ್ಲಿ ಉದ್ಯೋಗ ದೊರಕಿಸಿಕೊಟ್ಟರು. ತಿಂಗಳಿಗೆ ಇನ್ನೂರು ರೂಪಾಯಿ ಪಗಾರ ಅವರಿಗೆ ದೊರಕುತಲಿದ್ದಿತು.

ಯಮುನಾಚಾರ್ಯರ ಪ್ರಾಯ ನಲವತ್ತಿರಬಹುದು. ಆದರೂ ವಿವಾಹಿತರಲ್ಲ. ಆಜನ್ಮ ಬ್ರಹ್ಮಚಾರಿಗಳಾಗಿ ಬಾಳಬೇಕೆಂದು ಅವರು ಪಣ ತೊಟ್ಟಿದ್ದರು. ಮನೆಯಲ್ಲಿ ಅಡಿಗೆಯವ, ಕೆಲಸಕ್ಕೊಬ್ಬ ಆಳು ಈರ್ವರಲ್ಲದೆ ಬೇರೆ ನರಹುಳುವಿನ ಸುಳಿವಿಲ್ಲ. ಹೀಗೆ ಹೆಂಗಸರ ಸುಳಿವಿಲ್ಲದ ಅವರ ವಸತಿ ನಮ್ಮಂತಹ ಹರಟೆಮಲ್ಲರಿಗೆ ಒಂದು ಆಶ್ರಯಸ್ಥಾನವೆನಿಸಿತು. ಆಗಾಗ ಅವರಲ್ಲಿಗೆ ನಾನು ಹೋಗುತಿದ್ದೆ; ಮಾತಾಡುವುದರಲ್ಲಿ ಹೊತ್ತು ಕಳೆಯುತಿದ್ದೆ. ವಿಜ್ಞಾನ ಆಚಾರ್ಯರ ಮೆಚ್ಚಿಕೆಯ ವಿಷಯ; ಅದರಲ್ಲಿಯೂ ಯಾಂತ್ರಿಕ ವಿಜ್ಞಾನವೆಂದರೆ ಅವರ ಪ್ರಾಣ. ಅವರ ಬೀರು ಮೇಜುಗಳಲ್ಲಿ ಆ ಶಾಸ್ತ್ರಕ್ಕೆ ಸಂಬಂಧಿಸಿದ ಹೊತ್ತಗೆಗಳೇ ತುಂಬಿದ್ದುವು. ಈ ಹೊತ್ತಗೆಗಳ ಇರವು ಅವರ ಅಭ್ಯಾಸದ ಆಳವನ್ನು ನನಗೆ ಅರುಹಿತು. ಒಂದು ದಿನ ಈ ವಿಷಯವನ್ನು ಪ್ರಸ್ತಾಪಿಸಲು ನಾನು ಬಾಯ್ದೆರೆದೆ. ಅವರು ಆಗ ನಗುತ್ತಾ ಉಸುರಿದರು. “ನಿಜ. ನೀವಂದಂತೆ ನಾನು ಯಾಂತ್ರಿಕ ವಿಜ್ಞಾನವನ್ನು ತುಸು ಆಳವಾಗಿ ಅಭ್ಯಾಸ ಮಾಡುತಲಿರುವೆನು. ಕೆಲವು ನೂತನ ಪ್ರಯೋಗಗಳನ್ನು ನಡೆಸಿರುವೆನು. ಆದರೆ ಅವೆಲ್ಲಾ ನಿಮಗೆ ರುಚಿಸವು. ಒಬ್ಬೊಬ್ಬರಿಗೆ ಒಂದೊಂದು ವಿಷಯ ಮೆಚ್ಚಿಕೆ. ನೀವು ಪಂಪ ಕವಿಯ ಪ್ರಶಸ್ತಿಯನ್ನು ನನ್ನ ಮುಂದೆ ಬಣ್ಣಿಸಿದರೆ, ಅದು ಕೋಣನ ಮುಂದೆ ಕಿನ್ನರಿಯನ್ನು ಬಾರಿಸಿದಂತಾಗುವುದು.”

“ಹೊಸ ಹೊಸ ಪ್ರಯೋಗಗಳನ್ನು ನಡೆಸುತಿರುವಿರೆ?” ನಾನು ಅಚ್ಚರಿಯಿಂದ ದೃಷ್ಟಿಯನ್ನು ಅವರ ಮೊಗದೆಡೆಗೆ ಹೊರಳಿಸಿದೆ.

“ಹೌದು. ಆದರೆ ಅದೇನು ಎಂದು ಮಾತ್ರ ನನ್ನ ಪ್ರಶ್ನಿಸಬೇಡಿ” ಆಚಾರ್ಯರ ತುಟಿಗಳು ಎಳೆನಗೆಯ ತಂಬೆಳಕನ್ನು ಸೂಸಿದುವು.

“ಒಂದು ಹೊಸ ಸಂಶೋಧನೆಯದು. ಅದು ಯಶಸ್ವಿಯಾದರೆ ನಿಮಗೆ ತಿಳಿಸುವೆನು. ಅದು ಈ ಜಗತ್ತಿಗೇ ಅಪೂರ್ವವಾದುದು.”

ಆಚಾರ್ಯರು ದಿನೇ ದಿನೇ ಬಡಕಲಾಗುತ್ತ ಬರುತಿದ್ದರು. ಅವರ ಕೈಕಾಲುಗಳು ಸೊರಗಿದುವು. ಅವರ ಎಣ್ಣೆಗೆಂಪಿನ ಮೊಗ ಇನ್ನೂ ಕಪ್ಪೇರುತಿದ್ದಿತು. ಕಣ್ಣುಗಳು ಕೆಂಬಣ್ಣವನ್ನು ತಳೆಯುತಿದ್ದುವು. ಕಣ್ಣುಗಳ ನೋಟ

ಮೊದಲಿಗಿಂತಲೂ ತೀಕ್ಷ್ಣತೆಯನ್ನು ತಳೆದಿತು. ಆದರೆ ಅವರ ಮೈಯಲ್ಲಿ ಬಳಲಿಕೆಯ ಲಕ್ಷಣಗಳು ತೋರಿ ಬರುತ್ತಲಿರಲಿಲ್ಲ. ಕೈಕಾಲುಗಳು ಮೊದಲಿಗಿಂತಲೂ ಚುರುಕಾಗಿ ಸರಿಯುತ್ತಿದ್ದುವು. ನುಡಿಗಳಲ್ಲಿ ಉತ್ಸಾಹ ಅಡಕವಾಗಿತ್ತು. ಮೊಗದಲ್ಲಿ ಸಂತಸದ ಮುಗುಳ್ನಗೆಗಳು ಆಗಾಗ ಮೂಡುತ್ತಿದ್ದುವು.

"ನೀವು ಬಹಳ ಸೊರಗಿರುವಿರಲ್ಲ" ಒಮ್ಮೆ ನಾನು ಆಚಾರ್ಯರನ್ನು ಪ್ರಶ್ನಿಸಿದೆ. "ಆರೋಗ್ಯ ಚೆನ್ನಾಗಿಲ್ಲವೇ? ನೀವು ಮಿತಿಮೀರಿ ದುಡಿಯುತ್ತಿರುವ ಹಾಗೆ ಕಾಣುತ್ತದೆ."

"ನನಗೇನಾಗಿದೆ? ಚೆನ್ನಾಗಿಯೇ ಇದ್ದೇನೆ." ಆಚಾರ್ಯರು ಉತ್ಸಾಹದ ದನಿಯಲ್ಲಿ ಮಾತನಾಡಿದರು. "ನನ್ನ ಮೈಕೈಗಳು ತುಸ ಬತ್ತಿರಬಹುದು. ಆದರೆ ನನ್ನ ಮನಸ್ಸು ಬುದ್ಧಿಗಳು ಎಂದಿಗಿಂತಲೂ ಹೆಚ್ಚು ಉಲ್ಲಾಸದಲ್ಲಿವೆ."

"ನಿಮ್ಮ ಸಂಶೋಧನೆ ಮುಗಿಯಿತೇ?" ನಾನು ಅವರು ನಡೆಸುತ್ತಿದ್ದ ಪ್ರಯೋಗದ ಹೊಲಬನ್ನರಿಯೋಣವೆಂದು ಪ್ರಶ್ನಿಸಿದೆ.

"ಪೂರ್ತಿಯಾಗುತ್ತಾ ಬಂದಿದೆ." ಆಚಾರ್ಯರು ನಸುನಗುತ್ತಾ ಉಸುರಿದರು."

"ಇರಲಿ, ನನ್ನ ಸಂಶೋಧನೆ ಯಾವುದರ ಬಗ್ಗೆ ಎಂದು ನಿಮ್ಮ ಊಹೆ?"

"ನಾನೇನು ಬಲ್ಲೆ? ನಿಮ್ಮ ಮೋಟಾರು ಯಂತ್ರಗಳ ಬಗ್ಗೆ ಇರಬಹುದು."

"ಮೋಟಾರು ಯಂತ್ರವಲ್ಲ; ಅದು ಅತಿ ಸೋಜಿಗವಾದುದು. ಅದು ಯಶಸ್ವಿಯಾದರೆ ನಮ್ಮ ಜೀವನದಲ್ಲಿಯೇ ಹಿರಿಯ ಕ್ರಾಂತಿಯಾಗುವುದು. ಗೆಲವು ನನ್ನದೆಂಬ ನಂಬಿಕೆ ಇದೆ."

"ನನ್ನ ಬುದ್ಧಿ ಓಡಲೊಲ್ಲದು." ಆಚಾರ್ಯರ ಸಂಶೋಧನೆ ಯಾವ ಬಗೆಯದಿರಬಹುದೆಂದು ಊಹಿಸಲಾರದ ನಾನು ನುಡಿದೆ.

"ಅದೊಂದು ದಿನ ಜನಾರ್ದನರಾಯರಲ್ಲಿ ನಾವು ಮಾತಾಡಿದೆವಲ್ಲ." ಆಚಾರ್ಯರು ನಮ್ಮಿರ್ವರ ಕೆಳೆತನ ಕುಡಿಬಿಟ್ಟ ಮೊದಲಿನ ದಿನದ ನೆನಹನ್ನು ನೀಡಿದರು. "ಕಾಲದ ಮೇರೆಯನ್ನು ಮೀರುವುದು ಸಾಧ್ಯವೆಂದು ನಾನು ಅಂದು ವಾದಿಸಿದೆನಲ್ಲ. ಕಾಲದ ಕಡಲನ್ನು ಹಾಯುವ ನೌಕೆಯನ್ನು ನಿರ್ಮಿ

ಸುವ ಸಾಹಸ ನನ್ನದು. ನನ್ನ ಕಲ್ಪನೆಯನ್ನು ಯಥಾರ್ಥವಾಗಿಸಿದ ಕಾಲ ಯಾನದಲ್ಲಿ ಪಯಣಗೈಯಲು ನಿಮ್ಮೆಲ್ಲರನ್ನು ಆಮಂತ್ರಿಸಬೇಕೆಂದಿದೇನೆ."

ನಾನು ತುಟಿಪಿಟಿಯದೆ ಆಚಾರ್ಯರ ಮೊಗವನ್ನೇ ನಿಟ್ಟಿಸಿದೆ. ಪರಿಹಾಸದ ನುಡಿಗಳಲ್ಲಿ ನಾವಾಡಿದುದು. ಅವರ ಮುಖ ಗಂಭೀರವಾಗಿತ್ತು. ಆತ್ಮಪೂರ್ವಕ ವಾಗಿ ಅವರು ನುಡಿದಿದ್ದರೆಂದು ಅವರ ಕಣ್ಣುಗಳೇ ಸಾರಿ ಹೇಳುತಿದ್ದುವು. ಅವರ ಮೆದುಳಿನ ಆಣಿಯೊಂದು ಸಡಿಲವಾಗಿರಬಹುದೇ ಎಂಬ ಸಂದೇಹ ನನ್ನ ಬಗೆಯಲ್ಲಿ ಮೂಡದಿರಲಿಲ್ಲ. ಆದರೆ ಅವರ ನಡೆ ಮತ್ತು ಹಾವಭಾವಗಳಲ್ಲಿ ತಲೆತಿರುಕತನದ ಆವ ಲಕ್ಷಣಗಳೂ ಇರಲಿಲ್ಲ.

"ನನ್ನ ನುಡಿಯನ್ನು ನೀವು ನಂಬುವುದಿಲ್ಲ ಅಲ್ಲವೆ ?" ಅವರ ಅರೆ ಬಿರಿದ ತುಟಿಗಳು ಹಲ್ಲುಗಳ ಹೊಳಪನ್ನು ಹರಹಿದುವು.

"ನೀವು ನುಡಿಯುವುದು ಪರಿಹಾಸವಲ್ಲವಷ್ಟೆ ?"

"ಅಲ್ಲ. ನಾನು ಯಥಾರ್ಥವಾಗಿಯೇ ಹೇಳುತಿದೇನೆ."

"ನನ್ನ ಬುದ್ಧಿ ನಿಮ್ಮವರಷ್ಟು ವೇಗವಾಗಿ ಕಲ್ಪನೆಯ ತೇರಹಿಂದೆ ಓಡ ಲೊಲ್ಲದು." ಎಂದು ನಾನು ನುಡಿದೆ.

"ನನ್ನ ಕಾಲಯಾನವನ್ನು ಒಂದು ಕಲ್ಪನೆಯೆಂದು ತಿಳಿದಿದೀರಿ, ಅಲ್ಲವೇ ?" ಆಚಾರ್ಯರ ಮೊಗದ ಮೇಲೆ ಕಿರುಮೋಡವೊಂದು ಸುಳಿದಿತು. "ಇರಲಿ, ಮುಂದಿನ ಭಾನುವಾರ ನಿಮಗೆ ರಜವಲ್ಲವೇ? ನನ್ನ ಮನೆಗೆ ಬನ್ನಿ. ಕಾಲಯಾನವನ್ನು ನಿಮಗೆ ತೋರಿಸುತೇನೆ. ನೀವು ಪುಕ್ಕಟೆಯಾಗಿ ಒಂದು ಪ್ರವಾಸ ಮಾಡಬಹುದು. ಅಗತ್ಯವಾಗಿ ನೀವು ಆ ದಿನ ಬರಲೇಬೇಕು."

"ಆಗಲಿ, ಭಾನುವಾರ ನಾನು ಮರೆವುದಿಲ್ಲ." ಎಂದು ಆಚಾರ್ಯರಿಗೆ ಭರವಸೆಗೊಟ್ಟೆ.

ಮರುದಿನ ಪೇಟೆಯಲ್ಲಿ ಗೋಪು ಸಿಕ್ಕಿದ. ಅವನು ನನ್ನನ್ನು ಪ್ರಶ್ನಿಸಿದ. "ಏನು ನಾಣಿ, ಇತ್ತೀಚೆಗೆ ಆಚಾರ್ಯರೇನಾದರೂ ದೊರಕಿದ್ದರೆ ?"

"ಹೂಂ. ನಿನ್ನೆ ಸಿಕ್ಕಿದ್ದರು" ಎಂದೆ ನಾನು.

"ಅವರು ನಿನಗೆ ಹೇಗೆ ಕಂಡುಬಂದರು ?" ಗೋಪುವಿನ ನೋಟದಲ್ಲಿ ಕುತೂಹಲ ಬೆರೆತಿದ್ದಿತು.

"ಹೇಗೆ ? ಎಂದಿನಂತೆಯೇ ಇದ್ದರು. ತುಂಬಾ ಮಾತಾಡಿದರು."

“ಅವರ ಮಾತುಗಳಲ್ಲಿ ಸೋಜಿಗವೇನೂ ಇರಲಿಲ್ಲವೆ? ” ಗೋಪು ನುಡಿದ. “ಅವರಿಗೆ ಐದು ನಿಮಿಷ ಕಡಿಮೆಯಾಗಿದೆ. ನಿನ್ನೊಡನೆ ಅವರ ಯಂತ್ರಶೋಧನೆಯ ವಿಚಾರವೇನನ್ನೂ ಎತ್ತಲಿಲ್ಲವೆ? ”

“ಏನೋ ಆ ಸಮಾಚಾರ ಹೇಳಿದರು. ಭಾನುವಾರ ತಮ್ಮ ವಸತಿಗೆ ಬರಲು ನನ್ನನ್ನು ಕರೆದಿದಾರೆ. ”

“ಹೌದು. ನನ್ನನ್ನೂ ಅವರು ಆಮಂತ್ರಿಸಿದಾರೆ ಕಣೋ. ಏನೋ ಒಂದು ಕಾಲಯಾನವೋ, ರಾತ್ರಿಯಾನವೋ, ಏನನ್ನೋ ಒಂದು ಅವರು ನಿರ್ಮಿಸಿದಾರಂತೆ. ಅದರಲ್ಲಿ ಕುಳಿತು ಭೂತಭವಿಷ್ಯಗಳ ಕಡಲನ್ನು ದಾಟ ಬಹುದಂತೆ. ಎಲ್ಲ ಬರಿ ಹುಚ್ಚು! ಇಲ್ಲದಿದ್ದರೆ ಸಮುದ್ರವನ್ನು ಹಾಯ್ದಂತೆ ಸಮಯವನ್ನು ದಾಟಲಾಗುವುದೇ? ನೀನೇನಾದರೂ ಭಾನುವಾರ ಅವರಲ್ಲಿಗೆ ಹೋಗುವಿಯಾ? ”

“ಪ್ರೀತಿಯಿಂದ ಕರೆದಿದಾರೆ. ಹೋಗದಿದ್ದರೆ ಅವರು ನೊಂದುಕೊಳ್ಳ ಬಹುದು. ”

“ತಪ್ಪದೆ ಬಾ ಮಹಾರಾಯ. ಆಸಾಮಿಗೆ ಬುದ್ಧಿ ಸರಿಯಿಲ್ಲ. ನಾನೊ ಬ್ಬನೇ ಅವರಲ್ಲಿಗೆ ತೆರಳಲು ದಿಗಿಲಾಗುವುದು. ಇಬ್ಬರೂ ಜತೆಗೂಡಿಯೇ ಅವರಲ್ಲಿಗೆ ಹೋಗುವಾ. ”

“ಆಗಲಿ. ” ಎಂದು ಒಪ್ಪಿದೆ ನಾನು.

ಭಾನುವಾರವೂ ತಪ್ಪದೆ ಬಂದಿತು. ಬೆಳಿಗ್ಗೆ ಎಂಟು ತಾಸಿಗೆ ಗೋಪು ನನ್ನ ಬಿಡಾರಕ್ಕೆ ಬಂದ. ನಾವಿಬ್ಬರೂ ಆಚಾರ್ಯರ ಮನೆಯ ಹಾದಿಯನ್ನು ಹಿಡಿದೆವು. ಅವರ ವಸತಿಯೇನೂ ಹೆಚ್ಚು ದೂರದಲ್ಲಿರಲಿಲ್ಲ. ನನ್ನ ಮನೆಯಿಂದ ಕೆಲ ನಿಮಿಷಗಳ ನಡಿಗೆ ಸಾಕು.

ಆಚಾರ್ಯರು ನಮ್ಮಿಬ್ಬರನ್ನೂ ಆದರದಿಂದ ಬರಮಾಡಿಕೊಂಡರು. ನಮ್ಮನ್ನು ಕಾಣಲು ಅವರ ಮೊಗ ಹರುಷದಿಂದ ಅರಳಿ ಗುಲಾಬಿ ಹೂವಿ ನಂತಾಯಿತು. ನಮ್ಮೀರ್ವರ ಕೈಗಳನ್ನೂ ಹಿಡಿದು ಕುಲುಕುತ್ತಾ ಅವರು ನುಡಿದರು. “ಬನ್ನಿ, ಬನ್ನಿ; ಕುಳ್ಳಿರಿ. ನೀವು ಬರುವುದಿಲ್ಲವೇನೋ ಎಂದು ನಾನು ಅನುಮಾನಿಸಿದ್ದೆ. ನನ್ನ ಕರೆಯನ್ನು ನೆನಪಿನಲ್ಲಿಟ್ಟು ನೀವು ದಯ ಮಾಡಿಸಿದುದು ಹಿರಿಯ ಸಂತೋಷ. ”

ಮನೆಯ ಹಜಾರದಲ್ಲಿ ಅವರು ನಮ್ಮನ್ನು ಕುಳ್ಳಿರಿಸಿದರು. ಇನ್ನೊಂದು ಕುರ್ಚಿಯ ಮೇಲೆ ಅವರೂ ಆಸೀನರಾದರು. ನಮ್ಮ ಕಡೆಗೆ ಸಿಗರೇಟು ಪೇಕೆಟನ್ನು ಚಾಚುತ್ತಾ ಅವರು ಉಸುರಿದರು. "ನನ್ನದೊಂದು ಹುಚ್ಚು. ಹೊಸದೊಂದು ಯಂತ್ರ ನಿರ್ಮಿಸಿದೇನೆ. ನಾನು ಅದಕ್ಕೆ ನಾಮಕರಣಗೈದುದು ಕಾಲಯಾನವೆಂದು. ನೀವಿಬ್ಬರೂ ನನ್ನ ಸಲುಗೆಯ ಗೆಳೆಯರು. ಯಂತ್ರವನ್ನು ನಿಮಗೆ ತೋರಿಸೋಣ ಎಂದು ಆಲೋಚಿಸಿದೆ. ಹಾಗೆಯೇ ನಿಮ್ಮಿರ್ವರನ್ನೂ ಮನೆಗೆ ಬರಲು ಆಮಂತ್ರಿಸಿದೆ."

"ಅದು ಕಾಲಸಮುದ್ರವನ್ನು ದಾಟುವ ನೌಕೆಯೇ?" ಸಿಗರೇಟಿಗೆ ಬೆಂಕಿ ಹಚ್ಚುತಲಿದ್ದ ಗೋಪು ಚಕಿತ ದೃಷ್ಟಿಯನ್ನು ಆಚಾರ್ಯರ ಮೊಗದತ್ತ ಹೊರಳಿಸಿದ.

"ಹೌದು. ಆ ಯಂತ್ರವನ್ನು ನಿಮಗೆ ತೋರಿಸುತ್ತೇನೆ. ಏರಿದವನನ್ನು ಹೊತ್ತುಕೊಂಡು ಅದು ಚಲಿಸುವುದು ನಿಜ. ಆದರೆ ಯಾವುದನ್ನು ದಾಟುತ್ತದೆಂದು ಅನುಭವದ ಮೂಲಕ ತಿಳಿದೇ ಹೇಳಬೇಕು. ಆದರೆ ನನ್ನ ನುಡಿಗಳನ್ನು ನೀವು ನಂಬಲಾರಿರಿ." ಆಚಾರ್ಯರು ತುಟಿಗಳ ಮೇಲಿಂದ ಸಿಗರೇಟು ತೆಗೆದು ಉಸುರಿದರು. "ಕಾಲವನ್ನು ಅತಿಕ್ರಮಿಸುವ ಸಮಸ್ಯೆ ಅತಿ ಸರಳವಾದುದು. ಯಾವ ತೊಡಕೂ ಇಲ್ಲ. ಆದರ ಅತಿ ಸರಳವಾದುದನ್ನೂ ಮಾನವ ಬುದ್ಧಿ ಗ್ರಹಿಸಲಾರದು."

"ಅಂದರೆ ವಿಮಾನದಲ್ಲಿ ಕುಳಿತು ಆಗಸವನ್ನು ಹಾಯ್ದಂತೆ, ನಾವು ಕಾಲವನ್ನೂ ದಾಟಬಹುದೇ?" ನಾನು ಪ್ರಶ್ನಿಸಿದೆ.

"ಹೌದು. ಅದೇ ಈ ತನಕ ನನ್ನ ಮಿದುಳನ್ನು ತಿನ್ನುತಲಿದ್ದ ಸಮಸ್ಯೆಯಾಗಿತ್ತು. ಆದರೆ ಈಗ ಅದು ಬಗೆಹರಿದಿದೆ. ಕಾಲಯಂತ್ರ ಸಿದ್ಧವಾಗಿದೆ. ಅದರ ಮೇಲೆ ಕುಳಿತು ಭೂತಭವಿಷ್ಯಗಳ ಕೊನೆಯಂಚನ್ನು ನಾವು ಸೇರಬಹುದು." ಬಾಯಿಂದ ಹೊರಟು ಗಾಳಿಯಲ್ಲಿ ಮೇಲೇರುತಿದ್ದ ಸಿಗರೇಟಿನ ಹೊಗೆಯನ್ನು ದಿಟ್ಟಿಸುತಿದ್ದ ಆಚಾರ್ಯರ ಮಾತುಗಳು ಮುಂದುವರಿದುವು. "ನನ್ನ ಶೋಧನೆಯನ್ನು ನಿಮಗೆ ತೋರಿಸೋಣವೆಂದು ಆಮಂತ್ರಿಸಿದೆ. ಆದರೆ ಮೊದಲು ಕೊಂಚ ಉಪಹಾರ ತೆಗೆದುಕೊಳ್ಳೋಣ. ಅನಂತರ ಕಾಲಯಾನವನ್ನೂ ಅದರ ಉಪಯೋಗವನ್ನೂ ಕಾಣಿಸುವಂತೆ."

" ಈಗ ತಾನೇ, ನಾವು ಕಾಫಿ ಫಲಾಹಾರಗಳನ್ನು ಮುಗಿಸಿಕೊಂಡು ಬಂದಿರುವೆವು. ಮರಳಿ ತಿನ್ನಲು ಹೊಟ್ಟೆಯಲ್ಲಿ ಎಡೆ ಬೇಡವೆ ? " ಎಂದ ಗೋಪು.

" ಆದರೆ ಹೊಟ್ಟೆ ಸ್ಥಿತಿಸ್ಥಾಪಕ ಗುಣವುಳ್ಳದ್ದು. " ಆಚಾರ್ಯರು ನಗುತ್ತಾ ನುಡಿದರು. "ಒಳಗೆ ತುರುಕಿದಂತೆ, ಅಲ್ಲಿ ಎಡೆ ದೊರೆಯುವುದು. ನಿಮಗೋಸುಗ ವಾಗಿಯೇ ತಿಂಡಿಗಳನ್ನು ತಯಾರಿಸ ಹೇಳಿದೆ; ಒಲ್ಲೆವೆಂದು ಹೇಳಿವರಾಗದು. ಮಧ್ಯಾಹ್ನದ ಊಟವಾದರೂ ಇಲ್ಲೆ ನಡೆಯುವುದು. "

ಅವರ ನಿರ್ಬಂಧಕ್ಕೆ ನಾವು ಒಳಗಾದೆವು. ಅವರ ಸೂರಿನ ನೆರಳನ್ನು ಸೇರಿದ ಮೇಲೆ ಅವರ ಅಂಕ ಮೀರುವುದೆಂತು? ಆಚಾರ್ಯರ ಸೂಚನೆಯಂತೆ ತಿನಸುಗಳ ತಟ್ಟೆಗಳೂ, ಕಾಫಿಯ ಕಪ್ಪುಗಳೂ ಬಂದು ನಮ್ಮ ಮುಂದಿನ ಮೇಜವನ್ನು ಅಲಂಕರಿಸಿದುವು. ಪಟ್ಟೆಗಳಲ್ಲಿದ್ದ ಬಿಸಿ ಬೋಂಡ ಕೇಸರಿಭಾತು ಗಳ ಪರಿಮಳ ಹಸಿವೆಯಿಲ್ಲದ ನಮ್ಮ ನಾಲಗೆಗಳಲ್ಲಿಯೂ ನೀರೂರಿಸಿತು. ಆಚಾರ್ಯರ ಆಣತಿಯಂತೆ ನಮ್ಮ ಕೈ-ಬಾಯಿಗಳಿಗೆ ಕೆಲಸಗೊಟ್ಟೆವು. ರುಚಿಕರ ವೆನಿಸಿದ ಆ ತಿಂಡಿಗಳು ನಮ್ಮ ನಾಲಗೆಗಳನ್ನು ತಣಿಸಿದುವು. ಸೊಗನಾದ ಕಾಫಿ ನಮ್ಮ ತೃಷೆಯನ್ನು ಹಿಂಗಿಸಿತು. ಆ ಕಾಫಿ ಪಾನದಿಂದ ನಮ್ಮ ಮೈಮನಗಳಲ್ಲಿ ಹೊಸ ಹುರುಪು ಸಂಚರಿಸಿತು.

ಉಪಾಹಾರ ಮುಗಿಯಲು ಆಚಾರ್ಯರು ನಮ್ಮ ಕೈಗಳಿಗೆ ಸಿಗರೇಟನ್ನು ಇತ್ತು ನುಡಿದರು. " ಇನ್ನು ತಡೆಯಬೇಕಾದುದಿಲ್ಲ. ಬನ್ನಿ ಕಾಲಯಂತ್ರ ವನ್ನು ನೋಡಲು. "

ಸಿಗರೇಟುಗಳಿಗೆ ಬೆಂಕಿಹಚ್ಚಿ ನಾವು ಕುರ್ಚಿಗಳಿಂದೆದ್ದು ಅವರನ್ನು ಹಿಂಬಾಲಿಸಿದೆವು.

೨

ಆಚಾರ್ಯರು ನಮ್ಮನ್ನು ಒಳಮನೆಯ ಕೋಣೆಯೊಂದಕ್ಕೆ ಕರೆದೊಯ್ದರು. ಕೋಣೆಯನ್ನು ಕತ್ತಲೆ ಮುಸುಕಿತ್ತು. ಕರಿ ಪರದೆಗಳು ಕಿಟಕಿ ಕದಗಳನ್ನು ಮುಚ್ಚಿದ್ದುವು. ಆಚಾರ್ಯರು ಸ್ವಿಚ್ಚು ಒತ್ತಿ ವಿದ್ಯುದ್ದೀಪವೊಂದನ್ನು ಉರಿಸಿದರು. ಬೆಳಕು ಕೋಣೆಯೊಳಗಿನ ಕತ್ತಲೆಯನ್ನು ಇಲ್ಲವಾಗಿಸಿತು. ನಾನು ಕೋಣೆ ಯೊಳಗೆ ದೃಷ್ಟಿ ಹೊರಳಿಸಿದೆ. ಮಧ್ಯದಲ್ಲಿ ಹತ್ತಡಿ ಉದ್ದವಾದ ಒಂದು ದೊಡ್ಡ ಮೇಜವಿದ್ದಿತು. ಮೇಜವನ್ನು ನಾಲ್ಕಾರು ಕುರ್ಚಿಗಳು ಬಳಸಿದ್ದುವು. ಮೇಜದ ಮೇಲೆ ಮಕ್ಕಳಾಡುವ ಟ್ರೈಸಿಕಲ್ಲೊಂದಿತ್ತು. ಆದರೆ ಇದು ದೊಡ್ಡದು.

ಮೂರಡಿಗಳಷ್ಟು ಎತ್ತರವಾಗಿತ್ತು. ಆದರೆ ಅದರ ಹಿಡಿಗಳು ಮೋಟಾರು ಬೈಸಿಕಲ್ಲಿನಂತಿದ್ದುವು. ಹಿಡಿಗಳ ಮಧ್ಯದಲ್ಲಿ ಒಂದು ಕಿರುಹಲಗೆ ಇತ್ತು. ಹಲಗೆಯ ನಡುವೆ ಸೊನ್ನೆ ಗುರುತಿದ್ದು ಎಡಕ್ಕೂ ಬಲಕ್ಕೂ ಸುಮಾರು ಐವತ್ತು ಗೆರೆಗಳಿದ್ದುವು. ಪ್ರತಿಯೊಂದು ಗುರುತಿನ ಮೇಲೆ ೨, ೪, ೬ ಈ ಪರಿ ನೂರರ ವರೆಗೆ ಅಂಕೆಗಳಿದ್ದುವು. ಸೊನ್ನೆ ಗುರುತಿನ ಮೇಲೆ ಸೂಜಿಯೊಂದು ನಿಂತಿದ್ದಿತು. ಹಿಡಿಗಳ ಹಿಂದೆ ಚಿಕ್ಕದೊಂದು ಕಬ್ಬಿಣದ ಕೋಲು. ಗೋಪು ವಿಸ್ಮಯದಿಂದ ಯಂತ್ರವನ್ನು ನೋಡುತ್ತಾ ಆ ಕಿರಿಯ ಕಬ್ಬಿಣದ ಕೋಲು ಮುಟ್ಟಿದ. ಆಗ ಆಚಾರ್ಯರೆಂದರು “ಆ ಕೋಲನ್ನು ಅಲುಗಿಸಬೇಡಿ. ಆ ಕೋಲು ನಸು ಅಲುಗಿದರೆ ಸಾಕು, ಯಂತ್ರ ಚಲಿಸತೊಡಗುವುದು. ಮುಂಭಾಗಕ್ಕೆ ಅದನ್ನು ನೂಕಿದರೆ, ಅದು ಭವಿಷ್ಯದ ಪ್ರಪಂಚದಲ್ಲಿ ಪ್ರವೇಶಿಸುವುದು. ಒಮ್ಮೆ ಅದು ಚಲಿಸಿದರೆ ಸಾಕು: ಮರಳಿ ಅದನ್ನು ಕಾಣಬೇಕಾದರೆ ಇಪ್ಪತ್ತು ಸಾವಿರ ವರುಷಗಳು ಬೇಕಾಗುವುವು. ಹಿಂಭಾಗಕ್ಕೆ ಅದೇ ಕೋಲನ್ನು ಎಳೆದರೆ ಯಂತ್ರ ನಮಗೆ ಮರಳಿ ದೊರಕುವ ಸಂದರ್ಭವೇ ಇಲ್ಲ. ಇಪ್ಪತ್ತು ಸಾವಿರ ವರುಷಗಳ ಹಿಂದೆ ಹೋಗಿ ಅದು ಬೀಳುವುದು.”

ಸೋಜಿಗ ವಿಸ್ಮಯಗಳಿಂದ ನನ್ನ ಮೈ ನಡುಗಿತು. ನಾನು ಈ ವಿಚಿತ್ರ ಯಂತ್ರದಿಂದ ಕಣ್ಣುಗಳನ್ನು ಮೇಲಕ್ಕೆತ್ತಿದೆ. ಹೆಮ್ಮೆಯ ಕಣಗಳು ನೆರೆದಿದ್ದ ಕಣ್ಣುಗಳಿಂದ ಆಚಾರ್ಯರು ಯಂತ್ರವನ್ನು ನೋಡುತಿದ್ದರು. ನಸುನಗೆಯಿಂದ ಅವರ ತುಟಿಗಳು ಅರೆಬಿರಿದಿದ್ದುವು. “ಈ ಆಸನದ ಮೇಲೆ ಕುಳಿತು ಈ ಸಣ್ಣ ಕೋಲು ತಿರುಗಿಸಿದರೆ ಸಾಕು. ಯಂತ್ರ ಚಲಿಸತೊಡಗುವುದು. ಹತ್ತು ಸಾವಿರ ವರುಷಗಳತನಕ ಪ್ರಯಾಣ ಮಾಡಬಹುದು ನೋಡಿ. ಆ ತಗಡಿನ ಮೇಲೆ ಇರುವ ಅಂಕೆಗಳು ಶತಮಾನಗಳನ್ನು ತಿಳಿಸುತ್ತವೆ. ಮಧ್ಯದಲ್ಲಿರುವ ಸೊನ್ನೆಯೇ ವರ್ತಮಾನ ಕಾಲ. ಎಡಭಾಗದ ಅಂಕೆಗಳು ಗತಕಾಲದ ಶತಮಾನಗಳು; ಬಲಭಾಗದವು ಮುಂಬರುವ ಶತಮಾನಗಳು. ಕೋಲನ್ನು ಮುಂದಕ್ಕೆ ದೂಡಿದರೆ ಯಂತ್ರ ಭವಿಷ್ಯದೆಡೆಗೆ ಓಡುವುದು; ಹಿಂಭಾಗಕ್ಕೆ ಕೋಲನ್ನು ಸರಿಯಿಸಿದರೆ ಭೂತ ಕಾಲದೆಡೆಗೆ ತೆರಳುವುದು. ಈ ಯಂತ್ರದ ರಚನೆ ಬಹು ಸುಲಭ.”

ಗೋಪೂ ನಾನೂ ತುಟಿಪಿಕೆಯದೆ ಬೆರಗಾಗಿ ಒಮ್ಮೆ ಯಮುನಾಚಾರ್ಯರ ಮೊಗವನ್ನೂ, ಇನ್ನೊಮ್ಮೆ ಯಂತ್ರವನ್ನೂ ನೋಡುತ್ತಾ ನಿಂತೆವು. ಅವರ ನಿರ್ಮಾಣ ವೈಚಿತ್ರ್ಯವೆನಿಸಿದ ಕಾಲಯಾನವನ್ನು ಬಹು ಸಮಯದನಕ ನಿಟ್ಟಿಸಿದೆವು.

"ಈ ಯಂತ್ರಕ್ಕೆ ಒಂದೇ ಸೀಟನ್ನು ಮಾಡಗಿರುವೆನು. ಎರಡನ್ನು ಮಾಡಗಿದರೆ ಎಲ್ಲಿ ತೂಕ ತಪ್ಪುವುದೋ ಎಂಬ ಅಂಜಿಕೆಯಿಂದ ಹಾಗೆ ಮಾಡಲಿಲ್ಲ. ಇನ್ನೊಂದು ಸೀಟಿದ್ದಿದ್ದರೆ ಇಬ್ಬರೂ ಜತೆಯಾಗಿ ಪಯಣ ಗೈಯಬಹುದಿತ್ತು. ಈಗ ನಿಮ್ಮಿಬ್ಬರನ್ನೂ ಇಲ್ಲಿಯೇ ಕುಳ್ಳಿರಿಸಿ ನಾನು ಹೊರಡಬೇಕಾಗಿದೆ."

"ಈಗ ನೀವು ವಾಹನವೇರುವಿರಾ ?" ಗೋಪು ನಡುಕದ ದನಿಯಲ್ಲಿ ಪ್ರಶ್ನಿಸಿದ. ಕಣ್ಣುಗಳಲ್ಲಿ ಭಯವಿಸ್ಮಯದ ಕಿಡಿಗಳು ನೆರೆದಿದ್ದುವು.

"ಹೌದು. ನನ್ನ ಹೊಸ ಶೋಧನೆಯ ಪ್ರಯೋಗವನ್ನು ನಿಮಗೆ ತೋರಿಸೋಣವೆಂದೇ ನಿಮ್ಮನ್ನು ನನ್ನ ಮನೆಗೆ ಆಮಂತ್ರಿಸಿದೆ." ಮೆದು ದನಿಯಲ್ಲಿ ಆಚಾರ್ಯರು ನುಡಿದರು. "ಈ ಪ್ರಯೋಗ ಹೆಚ್ಚು ಸಮಯ ತೆಗೆದುಕೊಳ್ಳದು. ನಾಲ್ಕೈದು ತಾಸುಗಳು ಹಿಡಿಯಬಹುದು. ನೀವಿಲ್ಲಿಯೇ ಕುಳ್ಳಿರಿ; ಬೂದಿ ಮಾಡಲು ಸಿಗರೇಟುಗಳಿವೆ. ಓದಲು ಪತ್ರಿಕೆಗಳಿವೆ. ಹಸಿವೆಯಾದರೆ ಅಡಿಗೆಯವನಿದ್ದಾನೆ, ಹೇಳಿದರೆ ಬಡಿಸುತ್ತಾನೆ."

ನಾವು ಮರುಮಾತು ಆಡಲಿಲ್ಲ. ಆಚಾರ್ಯರು ಕಿಟಿಕಿಯ ಪರದೆಯನ್ನು ಮೇಲೆತ್ತಿದರು. ಇತರ ಕಿಟಿಕಿಗಳಂತೆ ಅದಕ್ಕೆ ಸಲಾಕೆಗಳಿರಲಿಲ್ಲ. ಆ ಕಿಂಡಿಗಾಗಿ ಎರಡು ಮಂದಿ ನುಗ್ಗಿ ಮನೆಯೊಳಗೆ ಪ್ರವೇಶಿಸಬಹುದು.

ಆಚಾರ್ಯರು ಮೇಜದ ಮೇಲೇರಿದರು. ಮೇಜದ ಮೇಲಿದ್ದ ಸಿಗರೇಟು ಪೇಕೊಂದು, ಕಡ್ಡಿಪೆಟ್ಟಿಗೆಗಳನ್ನು ಜೇಬಿನೊಳಗೆ ತುರುಕಿದರು. ಇನ್ನೊಂದು ಚಣದಲ್ಲಿ ಕಾಲಯಂತ್ರದ ಮೇಲೆ ಕುಳಿತುದೂ ಆಯಿತು. ಯಂತ್ರದ ಹಿಡಿಗಳೆರಡರ ಮೇಲೆ ಕೈಗಳನ್ನಿರಿಸಿ ಹೇಳಿದರು "ಇಲ್ಲಿಯೇ ಇರಿ. ಕೆಲ ತಾಸುಗಳಲ್ಲಿಯೇ ಬರುವೆನು."

ಅವರ ಕೈ ಮಧ್ಯದಲ್ಲಿದ್ದ ಕಿರುಗೋಲನ್ನು ಮುಂದಕ್ಕೆ ನೂಕಿತು. ಒಡನೆ ತುಪಾಕಿಯನ್ನು ಹಾರಿಸಿದಂತೆ ಒಂದು ಸದ್ದನ್ನು ನಾವು ಕೇಳಿದೆವು. ನಾವು ಮೇಜದ ಮೇಲಿದ್ದ ಕಾಲಯಂತ್ರವನ್ನು ನೋಡಿದೆವು. ಆದರೆ ಆಚಾರ್ಯರೂ ಕಾಲಯಂತ್ರವೂ ಮೇಜದ ಮೇಲಿರಲಿಲ್ಲ. ಮೇಜು ತೆರವಾಗಿತ್ತು. ತೆರೆದ ಕಿಟಿಕಿಯಿಂದ ಸುಯ್ಯಲದು ಕೋಣೆಯೊಳಗೆ ನುಗ್ಗಿತು !

"ತಲೆ ಕಾದಿದೆ ಮನುಷ್ಯನಿಗೆ. ಆತನ ಕಾಲಯಂತ್ರ ಹೊರಗೆ ಹೋಗಿ ಬಿದ್ದಿರಬಹುದು. ಕೈಕಾಲು ಮುರಿಯದಿದ್ದರೆ ಅವನ ಮಹಾಭಾಗ್ಯ !" ಎಂದು

ಉಸುರಿ ಗೋಪು ಕಿಟಕಿಯ ಬಳಿಗೆ ಓಡಿದ. ನಾನೂ ಅವನನ್ನು ಹಿಂಬಾಲಿಸಿದೆ. ಹೊರಗೆ ಹತ್ತಾರು ಗಿಡಬಳ್ಳಿಗಳಿರುವ ಒಂದು ಪುಟ್ಟ ಹೂದೋಟ. ಆಚಾರ್ಯರು ತೆರಳಿದ ಹಾದಿಯನ್ನು ತಾನು ಬಲ್ಲೆನೆಂದು ನುಡಿವಂತೆ ಗಿಡವೊಂದರಲ್ಲಿ ಅರಳಿದ ಮಲರೊಂದು ತಲೆದೂಗುತ್ತಿದ್ದಿತು. ಅಲ್ಲಿ ಆಚಾರ್ಯರಾಗಲೀ ಅವರ ಕಾಲ ಯಂತ್ರವಾಗಲೀ ಇರಲಿಲ್ಲ. ಅವರು ಕಣ್ಮರೆಯಾಗಿದ್ದರು.

ಹೂದೋಟದಿಂದ ಹೊರತೆರಳಲು ಬೇರೆ ದಾರಿಯೂ ಇರಲಿಲ್ಲ. ಬೇಲಿಯೊಂದು ತೋಟವನ್ನು ಆವರಿಸಿತ್ತು. ಗೋಪು ಮೇಜದ ಬಳಿಗೆ ಬಂದು ಕುರ್ಚಿಯೊಂದರ ಮೇಲೆ ಕುಳಿತು ನುಡಿದ “ ನಾಣಿ, ನನಗೆ ಒಂದೂ ತಿಳಿಯುವುದಿಲ್ಲ. ಆಚಾರ್ಯರ ಮೆದುಳು ಕೆಟ್ಟುಹೋಗಿದೆ ಎಂಬುದರಲ್ಲಿ ಎಳ್ಳನಿತೂ ಸಂದೇಹವಿಲ್ಲ. ಆದರೆ ಆ ಹಾಳು ಯಂತ್ರವೂ ಆಚಾರ್ಯರೂ ಎತ್ತ ಹೋದರು?”

“ ಅವರು ಕಾಲಯಂತ್ರದಲ್ಲಿ ಕುಳಿತು, ಕಾಲಸಾಗರದ ಅಲೆಗಳನ್ನು ಒಂದೊಂದಾಗಿ ದಾಟುತಿರಬಹುದು ” ನಾನು ನಿಧಾನವಾಗಿ ಉತ್ತರಿಸಿದೆ.

“ ಅವರು ನಿರ್ಮಿಸಿದ ಯಂತ್ರದ ಮೂಲಕ ಭೂತಭವಿಷ್ಯಗಳನ್ನು ದಾಟಬಹುದೆಂದು ನೀನೂ ಭಾವಿಸುವೆಯಾ? ಅವರ ಹುಚ್ಚು ನಿನ್ನನ್ನೂ ಬಾಧಿಸಿದ ಹಾಗಿದೆ. ”

“ ಅವರು ಮಾತಾಡುತಿದ್ದಾಗ ನೀನು ಅವರ ಕಣ್ಣುಗಳನ್ನು ನೋಡಿದೆಯಾ ಗೋಪು? ಅಲ್ಲಿ ಆತ್ಮಾರ್ಥತೆಯ ಕಿಡಿಗಳು ಬೆಳಗುತಿದ್ದುವು. ಅವರ ದನಿ ಸತ್ಯವನ್ನು ಸಾರಿ ಹೇಳುವಂತೆ ತೋರುತಲಿದ್ದಿತು. ನಡುಕ ಚಾಂಚಲ್ಯಗಳು ಅವರ ದನಿಯಲ್ಲಿ ಬೆರೆತಿರಲಿಲ್ಲ. ಅವರು ತುಂಬಾ ಅಭ್ಯಾಸ ಮಾಡಿದವರು. ಯಾಂತ್ರಿಕ ವಿಜ್ಞಾನದಲ್ಲಿ ಪಳಗಿದ ಕೈ ಅವರದು. ”

“ ಓದಿ ಕೆಟ್ಟ ಕೋಚಭಟ್ಟ ಎಂಬ ಗಾದೆಯಿದೆ ನೋಡು. ಅವರು ಮಿತಿಮೀರಿದ ಅಭ್ಯಾಸದಿಂದ ತಮ್ಮ ಮೆದುಳನ್ನು ಹಾಳುಮಾಡಿಕೊಂಡಿದಾರೆ.”

“ಅವರ ಬುದ್ಧಿ ಕೆಟ್ಟಂತೆ ನನಗೆ ಅನಿಸುವುದಿಲ್ಲ ಗೋಪು” ನಾನು ಉಸುರಿದೆ. “ಅವರ ಕಾಲಯಂತ್ರದಲ್ಲಿ ಹುರುಳೇನಾದರೂ ಇರಬಹುದು ಎಂದು ನನಗನಿಸುತ್ತಿದೆ. ಹೇಗೂ ಅವರು ತೆರಳಿದಾರೆ. ಮರಳಿ ಬಂದೊಡನೆಯೆ ಅವರೆತ್ತ ತೆರಳಿದರೆಂಬುದು ನನಗೆ ಅರಿವಾಗುವುದು. ”

“ ನನಗೇನೂ ಹೊಳೆಯುವುದಿಲ್ಲ. ಅವರ ಹುಚ್ಚು ನಿನ್ನನ್ನೂ ಸೋಂಕಿದೆ. ” ಎಂದು ಗೋಪು ಉಸಿರ್ಗರೆದ,

" ನಿನಗೆ ತಿಳಿಯದೆ ಇರುವುದು, ನಿನ್ನ ಬುದ್ಧಿ ಗ್ರಹಿಸುವುದು ಎಲ್ಲಾ ತಲೆತಿರುಕತನವೆಂದು ನಿನ್ನ ಭಾವನೆ. " ನಾನು ಗೋಪುವಿನ ಬಾಯಿ ಮುಚ್ಚಿಸಿದೆ.

ನಾವಿಬ್ಬರೂ ಕುರ್ಚಿಗಳ ಮೇಲೆ ಕುಳಿತು ಹರಟುತ್ತಿದ್ದೆವು. ಗಡಿಯಾರದ ದೊಡ್ಡ ಮುಳ್ಳು ಸುತ್ತು ಹಾಕುತಿದ್ದಿತು. ತಾಸುಗಳು ಒಂದೊಂದಾಗಿ ಉರುಳುತಿದ್ದುವು. ಆಚಾರ್ಯರ ಆಗಮನವನ್ನು ನಮ್ಮ ಕಣ್ಣುಗಳು ಇದಿರು ನೋಡುತಿದ್ದುವು. ಆದರೆ ಅವರ ಕಾಲಯಂತ್ರವಾಗಲೀ ಅವರಾಗಲೀ ನಮ್ಮ ದೃಷ್ಟಿಗೆ ಬೀಳರು. ಕಾಲಪುರುಷನ ಬಸಿರೊಳಗೆ ನುಗ್ಗಿದ ಆಚಾರ್ಯರು ಮರಳಿ ಬರದೇ ಹೋದರೆ ಎಂಬ ಸಂದೇಹ ನನ್ನ ಚಿತ್ತದಲ್ಲಿ ಮೂಡಿತು. ಭೀತಿಯಿಂದ ನನ್ನ ಎಲವುಗಳು ನಡುಗಿದುವು. " ಆಚಾರ್ಯರು ಬರದೇ ಹೋದರೆ ?" ನನ್ನ ದಿಗಿಲನ್ನು ನಾನು ಹೊರಚೆಲ್ಲಿದೆ.

" ಬರದೆ ಎಲ್ಲಿ ಹೋಗುವರು? ಇಲ್ಲಿಗೆ ಬರದಿದ್ದರೂ ಕೈಕಾಲು ಮುರಿದುಕೊಂಡ ಅವರ ದೇಹ ಆಸ್ಪತ್ರೆಯಲ್ಲಿ ಕಾಣಸಿಗುವುದು." ಎಳೆನಗೆಯನ್ನು ಬೀರುತ್ತಾ ಗೋಪು ನುಡಿದ.

ಹೊತ್ತು ಹನ್ನೆರಡು ತಾಸಾಯಿತು. ಆಚಾರ್ಯರು ಮರಳಿ ಬರಲಿಲ್ಲ. ಅಡಿಗೆಯವನು ಬಂದು ನಮ್ಮನ್ನು ಊಟಕ್ಕೆ ಕರೆದ. ಆಚಾರ್ಯರು ಬರುವುದೇ ಸಂದೇಹಾಸ್ಪದವೆಂದು ಭಾವಿಸಿದ್ದ ನಾವು ಊಟ ಮಾಡಿದೆವು. ಕೈ ತೊಳೆದುಕೊಂಡು ಬಂದು ಮರಳಿ ಆ ಕೋಣೆಯಲ್ಲಿ ಕುಳಿತೆವು. ಪತ್ರಿಕೆಗಳನ್ನು ತಿರುವಿಹಾಕತೊಡಗಿದೆವು. ಸಿಗರೇಟುಗಳು ಒಂದೊಂದಾಗಿ ಬೂದಿಯಾಗತೊಡಗಿದುವು. ಆದರೆ ಆಚಾರ್ಯರು ಮಾತ್ರ ಮರಳರು. ಸಂಜೆಯಾಯಿತು. ಗೂಡುಗಳನ್ನು ಮರಳಿ ಸೇರಲು ಬರುತ್ತಿದ್ದ ಏಹಗಪತಿಯ ಸ್ವನಗಳು ನಮ್ಮ ಕಿವಿಗಳಲ್ಲಿ ಮಾರುಲಿಗೊಂಡವು. ಆರು ತಾಸಾಯಿತು ಆಚಾರ್ಯರು ಮಾತ್ರ ಮರಳಿ ಬರಲೊಲ್ಲರು. ನನ್ನ ಎದೆಯಲ್ಲಿ ಆತಂಕದ ಅಲೆಗಳು ಮೂಡತೊಡಗಿದುವು. ಆಚಾರ್ಯರು ಬರದೇ ಹೋದರೆ!

" ಆತನ ನುಡಿಗೇಳಿ ಈತನಕ ಇಲ್ಲಿ ಕುಳಿತುದೇ ನಮ್ಮ ಮರುಳುತನ." ಗೋಪು ಕುರ್ಚಿಯಿಂದ ಮೇಲೆದ್ದ. " ಅವರು ತಮ್ಮ ವಾಹನದಿಂದ ಬಿದ್ದು ಮಂಡಿ ತಲೆಬುರುಡೆಗಳನ್ನು ಒಡೆದುಕೊಂಡಿರಬಹುದು. ಬಾ ಆಸ್ಪತ್ರೆಗಳಲ್ಲಿ ಅರಸೋಣ."

ನಾನು ಮಾರುಗೊಡಲು ಅವಕಾಶ ದೊರಕಲಿಲ್ಲ. ಸುಯ್ಯೆಲರಿಸ ನಾದ ನನ್ನ ಕಿವಿಗಳಲ್ಲಿ ಬಂದು ಬಡೆದಿತು. ಯಾರೋ ಕಿಟಕಿಯಿಂದ ಕೋಣೆಯೊಳಗೆ ನುಗ್ಗಿದಂತಾಯಿತು. ನಾನು ಕಿಟಕಿಯತ್ತ ಕಣ್ಣುಗಳನ್ನು ಹೊರಳಿಸಿದೆ. ಅಲ್ಲಿ ಯಾರೂ ಇರಲಿಲ್ಲ. ಮುಂದಿದ್ದ ಮೇಜದತ್ತ ಕಣ್ಣುಗಳು ಓಡಿದುವು.

ಕಾಲಯಂತ್ರ ಮರಳಿ ಬಂದು ಮೇಜದ ಮೇಲೆ ನಿಂತಿತ್ತು. ವಾಹನದಿಂದ ಕೆಳಗಿಳಿಯಲು ಆಚಾರ್ಯರು ಉಜ್ಜುಗಿಸುತಿದ್ದರು. ಅವರ ತಲೆಯ ಮೇಲಿನ ಹೇಟು ಮಾಯವಾಗಿತ್ತು. ತಲೆಯ ನವಿರುಗಳೆಲ್ಲ ಊರ್ಧ್ವಮುಖಿಗಳಾಗಿದ್ದುವು. ಬಳಲಿಕೆಯಿಂದ ಅವರ ಮೊಗ ಬಹಳ ಸೊರಗಿಹೋಗಿತ್ತು. ಹಣೆಯಿಂದ ಬೆವರ ಹನಿಗಳು ಉದುರುತಿದ್ದುವು. ಎದೆಯಿಂದ ಹೊಮ್ಮಿದ ನಿಡುಸಿರುಗಳು ಗಾಳಿಯಲ್ಲಿ ಬೆರೆಯುತಿದ್ದುವು. ಅವರು ತೊಟ್ಟಿದ್ದ ಬಿಳಿ ಇಜಾರು ಕೊಳೆಯಿಂದ ಕಪ್ಪಡರಿದ್ದಿತು. ನಾವು ಚಕಿತರಾಗಿ ಅವರ ಮೊಗದಿಂದ ಕಣ್ಣು ತೆಗೆಯಲಿಲ್ಲ.

“ಮನ್ನಿಸಿ, ನೀವು ನಿರೀಕ್ಷಿಸಿದುದಕ್ಕಿಂತಲೂ ಹೆಚ್ಚು ವೇಳೆಯನ್ನು ನಾನು ತೆಗೆದುಕೊಂಡೆ. ಬಹು ದೊಡ್ಡ ಪ್ರವಾಸ ನನ್ನದು.” ಜೇಬಿನಿಂದ ಕರವಸ್ತ್ರವನ್ನು ತೆಗೆದು ಮೊಗದಿಂದ ಹರಿಯುತಿದ್ದ ಬೆವರನ್ನು ಒರೆಸಿಕೊಳ್ಳುತ್ತಾ ಆಚಾರ್ಯರು ನುಡಿದರು. ರಣಾಂಗಣದಲ್ಲಿ ಗೆಲುವನ್ನು ಪಡೆದ ಮರಳಿದ ಯೋಧನ ಮುಖಮುದ್ರೆಯಾಗಿದ್ದಿತು ಅವರದು. “ಕೈಕಾಲು ಮೋರೆಗಳನ್ನು ತೊಳೆದುಕೊಂಡು ಬರುವೆ. ವಿಪರೀತ ನೀರಡಿಕೆ, ಅದನ್ನು ಅಡಗಿಸಿಕೊಂಡು ಬರುವೆ.”

ನಮ್ಮ ಮಾರುಲಿಯನ್ನು ಆಚಾರ್ಯರು ನಿರೀಕ್ಷಿಸಲಿಲ್ಲ. ನಮ್ಮ ಕೊರಳಿಂದ ಮಾತು ಹೊರಡುವ ಮುನ್ನ ಅವರು ಕೋಣೆಯಿಂದ ತೆರಳಿದ್ದರು.

ಆಚಾರ್ಯರು ಮರಳಿಬರಲು ಅರ್ಧ ತಾಸು ಸಮಯ ತೆಗೆದುಕೊಂಡರು. ಅವರು ತಮ್ಮ ಕೈಕಾಲು ಮೊಗಗಳನ್ನು ತೊಳೆದು ಉಡಿಗೆ ತೊಡಿಗೆಗಳನ್ನು ಬದಲಾಯಿಸಿದ್ದರು. ತಲೆ ಬಾಚಿ ಕೂದಲನ್ನು ಸರಿಪಡಿಸಿಕೊಂಡಿದ್ದರು. ಉತ್ಸಾಹದ ಕಿಡಿಗಳು ಅವರ ಕಣ್ಣುಗಳಲ್ಲಿ ಮಿಂಚುತಿದ್ದುವು. ಮೊಗದಲ್ಲಿ ಆಯಾಸದ ಒಂದೆರಡು ಗೆರೆಗಳು ಮಾತ್ರ ಮೂಡಿದ್ದುವು.

“ನನ್ನ ಪಯಣ ಪೂರ್ತಿಯಾಗಿ ಯಶಸ್ವಿಯಾಯಿತು.” **ಅವರು** ತುಟಿಗಳ ಮೇಲಿದ್ದ ಸಿಗರೇಟನ್ನು ತೆಗೆದು ಬೆರಳುಗಳ ಸಂದಿನಲ್ಲಿ ಹಿಡಿದರು.

ನಮಗೆ ಇದಿರಾಗಿ ಬಂದು ಕುರ್ಚಿಯ ಮೇಲೆ ಅವರು ಮಂಡಿಸಿದರು. ಮೃದು ಹಾಸದ ತನಿವೆಳಕು ಅವರ ಮೊಗದ ಮೇಲೆ ಬೆಳಗುತಲಿದ್ದಿತು. "ಅಜಾಗರೂಕತೆಯಿಂದ ನನ್ನ ಕಾಲಯಂತ್ರ ಒಂದು ಅಪಗಡಕ್ಕೆ ತುತ್ತಾಯಿತು."

ನಮ್ಮ ಕಣ್ಣುಗಳು ಮೇಜದ ಮೇಲಿದ್ದ ಯಂತ್ರದತ್ತ ಹೊರಳಿದುವು-ಶತಮಾನಗನ್ನು ಅರುಹುವ ಸಣ್ಣ ತಗಡು ಕಿತ್ತುಹೋಗಿತ್ತು. ಯಂತ್ರಕ್ಕೆ ಚಾಲನೆಯನ್ನು ಕೊಡುವ ಕಿರುಗೋಲು ಬಳುಕಿದಂತಾಗಿತ್ತು. ಯಂತ್ರವನ್ನು ಮುಸುಕಿದ ಧೂಳು ಅದು ಗೈದ ದೂರದ ಪಯಣವನ್ನು ಅರುಹುತಿದ್ದಿತು.

"ನಿಮ್ಮ ಕಾಲ ಪ್ರವಾಸದ ಅನುಭವಗಳನ್ನು ತುಸ ಅರುಹುವಿರಾ?" ನಾನು ಆಚಾರ್ಯರ ಮೊಗ ನೋಡಿದೆ. "ಭವಿಷ್ಯದ ಬಸಿರೊಳಗೆ ಹೊಕ್ಕು ಮರಳಿ ಬಂದ ನಿಮ್ಮ ಅದ್ಭುತ ಸಾಹಸವನ್ನು ಕೇಳಲು ಕುತೂಹಲ ಹುಟ್ಟಿದೆ."

"ಅಗತ್ಯವಾಗಿ ಹೇಳುವೆನು. ಆದರೆ ನನ್ನ ಕಾಲಯಾತ್ರೆಯನ್ನು ನೀವು ಯಾರೂ ನಂಬಲಾರಿರಿ." ಆಚಾರ್ಯರು ಉತ್ತರಿಸಿದರು. "ನನ್ನ ಪಾಳ್ಕೆ ಮಾನವನ ಕಲ್ಪನೆಯನ್ನು ಮೀರಿದುದು. ನನ್ನ ಪಯಣದ ಕತೆ ಕೇಳಿದ ಅನಂತರ ನನ್ನನ್ನೊರ್ವ ಕನಸುಣಿಯೊಂದೋ, ತಲೆತಿರುಕನೆಂದೋ ಎಣಿಸಬಹುದು."

"ಆದರೂ ನಂಬಿಕೆಯ ಮೇರೆಯನ್ನು ದಾಟಿದ ತಮ್ಮ ಪ್ರಯಾಣವನ್ನು ನಮಗೆ ತಿಳಿಸಿ." ನನ್ನ ಅರಿಕೆಗೆ ಗೋಪು ದನಿಗೂಡಿದ.

"ಆಗಲಿ ನನಗೋಸುಗ ನಾಲ್ಕಾರು ತಾಸು ನೀವು ಕಾದಿದ್ದೀರಿ. ನನ್ನ ಪಯಣದ ಕತೆ ಉಸುರಿಯಾದರೂ ನಿಮ್ಮ ಆ ಋಣ ತೀರಿಸುವೆನು. ನೀವು ಬೇಕಾದರೆ ನನ್ನ ಕತೆಯನ್ನು ನಂಬಿ, ಬೇಡವಾದರೆ ಬಿಡಿ. ನಾನೇನೋ ನನ್ನ ಪ್ರವಾಸದ ಅನುಭವಗಳನ್ನು ತಿಳಿಸಿಬಿಡುವೆನು." ಆಚಾರ್ಯರು ತಮ್ಮ ವಿಚಿತ್ರ ಪಯಣದ ಕತೆಯನ್ನು ಹೇಳಲು ಆರಂಭಿಸಿದರು. "ಈ ಕಾಲಯಂತ್ರ ನೀವೇ ನೋಡಿದ್ದಿರಲ್ಲ. ಅದರ ಮೇಲೆ ಕುಳಿತು ನಾನು ಕೋಲನ್ನು ಮುಂದಕ್ಕೆ ಚಲಿಸಿದೆ. ಯಂತ್ರ ನನ್ನನ್ನು ಹೊತ್ತುಕೊಂಡು ಭವಿಷ್ಯದ ಹಾದಿ ಹಿಡಿದಿತು. ಗಡಿಯಾರದ ಸೆಕಂಡು ಮುಳ್ಳಿನ ಚಲನೆಗಿಂತಲೂ ವೇಗವಾಗಿ ಹಗಲು ರಾತ್ರಿಗಳು ಉರುಳತೊಡಗಿದುವು. ಬಿಳುಪು ಕಪ್ಪುಗಳು ನನ್ನ ಕಣ್ಣುಗಳನ್ನು ಕವಿಯತೊಡಗಿದುವು. ಆಗಸದಲ್ಲಿ ಮೂಡಿಬರುತಿದ್ದ ನೇಸರು, ಎವೆಯಿಕ್ಕುವುದರೊಳಗೆ

ಬಾನ ನಡುವನ್ನೇರಿ, ಇನ್ನೊಂದು ಚಣದಲ್ಲಿ ಮರೆಯಾಗುತ್ತಿದ್ದ. ಚಾಮುಂಡಿ ಗುಡ್ಡದ ಮೇಲಿನ ವಿದ್ಯುದ್ದೀಪಗಳಂತೆ ತಾರೆಗಳು ಮಿನುಗಿ ಮರೆಯಾಗುತ್ತಿದ್ದುವು. ಸುರಳಿ ಹಗಲು ಇರುಳುಗಳು ಕಡಲಲ್ಲಿ ಒಂದರ ಹಿಂದೆ ಇನ್ನೊಂದರಂತೆ ಬರುವ ಅಲೆಗಳಂತೆ ಮೂಡುತ್ತಿದ್ದುವು; ಮಾಯವಾಗುತ್ತಿದ್ದುವು. ನನ್ನ ಕಣ್ಣುಗಳಿಗೆ ಕತ್ತಲೆ ಕವಿದಂತಾಯಿತು; ತಲೆ ತಿರುಗಿತು ಆಸನದಿಂದ ನಾನೆಲ್ಲಿ ಕುಸಿದು ಬೀಳುವೆನೋ ಎಂದು ನಾನು ಅಂಜಿದೆ. ಹಾಗೇನಾದರೂ ನಾನು ಕೆಳಗುರುಳಿದರೆ, ಎದ್ದು ನಿಲ್ಲುವುದರೊಳಗಾಗಿ ಕಾಲಯಂತ್ರ ನನ್ನನ್ನು ಕಾದು ನಿಲ್ಲುವಂತಿಲ್ಲ. ಭೂಮಿಯ ಚಲನೆಗಿಂತಲೂ ವೇಗವಾಗಿ ಅದು ಓಡುತ್ತಿದ್ದಿತು. ನನ್ನನ್ನು ಬಿಟ್ಟು ಹತ್ತು ವರುಷದಾಚೆಯ ಗೆರೆಯನ್ನು ಸೇರುವುದು. ನಾನು ನಡುದಾರಿಯಲ್ಲಿ ನನಗಿಂತಲೂ ವಿಭಿನ್ನರಾದ ಮಾನವರೊಡನೆ ನನ್ನ ಆಯುಷ್ಯ ಕಳೆಯಬೇಕಾಗುವುದು. ಈ ಆಲೋಚನೆ ನನ್ನ ಚಿತ್ತದಲ್ಲಿ ಸುಳಿಯಲು ನನ್ನ ಎಲುವುಗಳು ನಡುಗಿದುವು. ಹಲ್ಲುಗಳು ಕಡಿದುವು. ನಡುಗುತ್ತಿದ್ದ ಬೆರಳುಗಳು ಯಂತ್ರವನ್ನು ಬಿಗಿಯಾಗಿ ಹಿಡಿದುವು. ಕಾಲಸಮುದ್ರದಲ್ಲಿ ನನ್ನ ನೌಕೆಯನ್ನು ಮುಂದೆ ನೂಕುತ್ತಿದ್ದೆ.

"ಕೆಳಗೆ ಇಳೆ ಹೊರಳುತ್ತಿದ್ದಿತು. ಆದರೆ ಯಂತ್ರದ ವೇಗ ಮಿತಿಮೀರಿದುದರಿಂದ ಕೆಳಗಿನ ದೃಶ್ಯಗಳನ್ನು ನನ್ನ ಕಣ್ಣುಗಳು ಗುರುತಿಸದಾದುವು. ಎಷ್ಟು ಶತಮಾನಗಳನ್ನು ದಾಟಿರುವೆನೆಂದು ತಿಳಿಯಲು ಕಾಲಮಾಪಕವನ್ನು ನೋಡಿದೆ. ಸೂಚಿ ಹತ್ತನೆಯ ಅಂಕೆಯ ಮೇಲಿದ್ದಿತು. ಹತ್ತು ಶತಮಾನಗಳಷ್ಟು ದೂರ ಭವಿಷ್ಯದ ಕಾಡಿನಲ್ಲಿ ನುಗ್ಗಿ ಬಂದಿದ್ದೆ. ಸಾವಿರ ವರುಷಗಳಾಚೆಗಿನ ಮಾನವನು ಆವ ಪರಿ ಜೀವಿಸುತ್ತಿರುವನೆಂದರಿಯಲು ನನ್ನ ಎದೆಯಲ್ಲಿ ಉತ್ಸುಕತೆ ಜನಿಸಿತು. ವೇಗ ಮಾಪಕವನ್ನು ನೋಡಿದೆ. ನಿಮಿಷಕ್ಕೆ ಅರ್ಧ ಶತಮಾನದಂತೆ ನನ್ನ ಯಂತ್ರ ಮುಂದೆ ಸಾಗುತ್ತಿದ್ದಿತು. ಮುಂಗೈಯಲ್ಲಿದ್ದ ಗಡಿಯಾರವನ್ನು ನನ್ನ ಕಣ್ಣುಗಳು ನೋಡಿದುವು. ಸಮಯ ಒಂಭತ್ತು ತಾಸು ಹದಿನೈದು ನಿಮಿಷವಾಗಿದ್ದಿತು. ನಾನು ೮-೪೫ಕ್ಕೆ ಪಯಣವನ್ನು ಆರಂಭಿಸಿದ್ದೆ. ಸಾವಿರ ವರುಷಗಳನ್ನು ದಾಟಲು ಅರ್ಧ ತಾಸು ಸಮಯ ತೆಗೆದುಕೊಂಡಿದ್ದೆ.

"ನಾನು ಯಂತ್ರದ ವೇಗ ಕಡಿಮೆ ಮಾಡಿದೆ. ನಿಮಿಷ ಒಂದಕ್ಕೆ ಒಂದು ವರುಷದಂತೆ ಅದು ಸಾಗತೊಡಗಿತು. ನಾನು ಇಳೆಯನ್ನು ನೋಡಿದೆ. ಆದರೆ ಪ್ರಪಂಚ ಇಂದಿನಂತಿಲ್ಲ. ಅದು ರೂಪಾಂತರ ಹೊಂದಿತು. ನಮಗೆ

ಪರಿಚಯವೆನಿಸಿದ ಮರಗಿಡಬಳ್ಳಿಗಳಿಲ್ಲ. ಮರಗಳು ಬಹು ವಿರಳವಾಗಿದ್ದುವು. ಅಲ್ಲೊಂದು ಇಲ್ಲೊಂದರಂತೆ ಬಹು ಗಿಡ್ಡವಾಗಿ ಅವು ಬೆಳೆದಿದ್ದುವು. ನಾನು ನೋಡಿದ ಅತಿ ಎತ್ತರದ ಮರ ಹತ್ತು ಅಡಿಗಳಿಗಿಂತ ಹೆಚ್ಚು ಎತ್ತರವಾಗಿರಲಿಲ್ಲ. ಗುಡ್ಡ ಬೆಟ್ಟಗಳು ಮಾಯವಾಗಿದ್ದುವು. ಎತ್ತ ನೋಡಿದರೂ ಕಣ್ಣು ತಲುಪುವನಕ ವಿಶಾಲವಾದ ಬಯಲು ಹರಡಿತ್ತು. ಬಯಲಲ್ಲಿ ವಿಚಿತ್ರವಾದ ಉಳುಮೆಯ ಯಂತ್ರಗಳು ಉಳುತಿದ್ದುವು. ಅಲ್ಲಲ್ಲಿ ತಿಳಿ ನೀರಿನ ಕಾಲುವೆಗಳು ಹರಿಯುತಿದ್ದುವು. ಅಲ್ಲಲ್ಲಿ ಕಾಲುವೆಗಳಲ್ಲಿ ದೋಣಿಗಳು ತೇಲುತಿದ್ದುವು. ವ್ಯವಸಾಯ ಕ್ಷೇತ್ರಗಳಿಗೆ ಜನರು ದೋಣಿಗಳಲ್ಲಿ ತೆರಳುತಿದ್ದರು; ಮರಳುತಿದ್ದರು. ಯಾಂತ್ರಿಕ ಶಕ್ತಿಯಿಂದ ಈ ದೋಣಿಗಳು ಓಡುತಿದ್ದುವು. ವ್ಯವಸಾಯ ಕ್ಷೇತ್ರಗಳಿಗೆ ಜನರು ದೋಣಿಗಳಲ್ಲಿ ತೆರಳುತಿದ್ದರು, ಮರಳುತಿದ್ದರು. ಯಾಂತ್ರಿಕ ಶಕ್ತಿಯಿಂದ ಈ ದೋಣಿಗಳು ಓಡುತಿದ್ದುವು. ಬಯಲಲ್ಲಿ ಸಾಲುಸಾಲಾಗಿ ತಲೆಯೆತ್ತಿ ವಿದ್ಯುತ್ಸ್ತಂಭಗಳು ನಿಂತಿದ್ದುವು. ಕಂಬಗಳ ತುದಿಗಳಲ್ಲಿ ತಂತಿಗಳ ಸಾಲು ತೋರಣಗಟ್ಟಿದಂತೆ ಒಂದರಮೇಲೆ ಇನ್ನೊಂದರಂತೆ ಕಂಗೊಳಿಸುತಿದ್ದುವು. ಈ ತಂತಿಗಳ ಇರವು ವ್ಯವಸಾಯವೆಲ್ಲ ವಿದ್ಯುತ್ತಿನಿಂದ ನಡೆಯುತಿದೆ ಎಂಬುದನ್ನು ನನಗೆ ಅರುಹಿತು.

"ನಾನು ತಲೆಯೆತ್ತಿ ನೋಡಿದೆ. ಆಕಾಶದಲ್ಲಿ ವಿಮಾನವೊಂದು ಹಾರಿ ಬರುತಿದ್ದಿತು. ನಾವು ಅನುದಿನ ನೋಡುವ ವಿಮಾನಗಳ ಮಾದರಿಯಲ್ಲ ಅದು. ಅದು ನಮ್ಮ ವಿಮಾನಕ್ಕಿಂತ ನೂರು ಪಾಲು, ಇನ್ನೂರು ಪಾಲು ಹಿರಿದಾದುದು. ಅದು ನಮ್ಮ ಗುಡ್ಸ್ ಟ್ರೇನುಗಳಂತೆ ಆರುನೂರು ಗಜಗಳಿಗಿಂತ ಹೆಚ್ಚು ಉದ್ದವಾದುದು. ಮಧ್ಯಭಾಗದಲ್ಲಿ ಮೂನ್ನೂರು ಗಜಗಳಿಗಿಂತ ಹೆಚ್ಚು ಅಗಲವಾಗಿತ್ತು. ಈ ಆಕಾಶ ನೌಕೆಯ ಬೃಹದಾಕಾರವನ್ನು ಕಂಡು ನನ್ನ ಎದೆ ತಲ್ಲಣಿಸಿತು. ಅಷ್ಟು ದೊಡ್ಡ ವಿಮಾನ ಸಂಚರಿಸುತಿದ್ದರೂ ಅದರ ಸದ್ದು ನಮ್ಮ ಮೋಟರು ಕಾರುಗಳ ದನಿಗಿಂತ ಹೆಚ್ಚು ತೀಕ್ಷ್ಣವಾಗಿರಲಿಲ್ಲ.

"ಇಷ್ಟು ಪರಿವರ್ತನೆಗಳ ಬಳಿಕ ಮಾನವ ಜನಾಂಗದ ಇರವನ್ನು ನಾನು ಪರೀಕ್ಷಿಸಬೇಕೆಂದು ನನಗನಿಸಿತು. ನಾನು ಕಾಲಯಂತ್ರವನ್ನು ನಿಲ್ಲಿಸಿದೆ. ಸಾಹಸದಿಂದ [illegible] ಕಾಲಯಂತ್ರವನ್ನು [illegible] [illegible] ನಡುವೆ ತಡೆಗಿದೆ. ಜನರು [illegible] ನನ್ನ ಎಸಕವನ್ನು ವೀಕ್ಷಿಸಿ [illegible] ಎಂದು ಸುತ್ತಲೂ ಕಣ್ಣುಗಳನ್ನು ಹೊರಳಿಸಿ

ನೋಡಿದೆ. ಯಾರೂ ನನ್ನ ದೃಷ್ಟಿಗೆ ಬೀಳಲಿಲ್ಲ. ನಾನು ಕಾಲುವೆಯ ದಡವನ್ನು ಹಿಡಿದು ಮುಂದೆ ನಡೆದೆ.

೩

“ ಪಯಣದಿಂದ ನನ್ನ ಮೈಕೈಗಳು ಬಳಲಿದ್ದುವು. ಹಸಿವೆಯಾಗುತಿತ್ತು. ಜೇಬಿನೊಳಗೆ ತುರುಕಿದ್ದ ಬಿಸ್ಕೇಟು ಪೊಟ್ಟಣವನ್ನು ಹೊರತೆಗೆದು ಎರಡು ಬಿಸ್ಕೇಟುಗಳನ್ನು ಬಾಯೊಳಗೆ ತುರುಕಿ ಮೆಲುಕು ಹಾಕತೊಡಗಿದೆ. ” ಆಚಾರ್ಯರು ತಮ್ಮ ಪ್ರವಾಸ ವೃತ್ತಾಂತವನ್ನು ಮುಂದುವರಿಸಿದರು. “ ನೇಸರು ಬಾನ ನಡುವನ್ನೇರಲು ಸಾಹಸಗೈಯುತ್ತಿದ್ದ. ಆತನ ಕಿರಣಗಳು ಬಂದು ನನ್ನ ಮೊಗವನ್ನು ಮುತ್ತಿಡುತಿದ್ದುವು. ಪಕ್ಕದಲ್ಲಿ ತಿಳಿನೀರಿನ ಕಾಲುವೆ ಹರಿಯುತಿದ್ದಿತು. ಎಡಬಲಗಳಲ್ಲಿ ಕಣ್ಣು ತಲುಪುವತನಕ ವಿಶಾಲವಾದ ಬಯಲು. ಮನೆಗಳಾಗಲೀ, ಹಳ್ಳಿಗಳಾಗಲೀ ನನ್ನ ಕಣ್ಣುಗಳಿಗೆ ಬೀಳವು. ಬೆಟ್ಟಗುಡ್ಡಗಳನ್ನು ಕಡಿದು ಬಯಲಾಗಿಸಿದ ನಾಸಿಗರ ವಸತಿಗಳೆಲ್ಲಿ ಎಂದು ನಾನು ಆಶ್ಚರ್ಯಗೊಂಡೆ. ಮನದಲ್ಲಿಯೇ ಆಲೋಚಿಸುತ್ತಾ ಕಾಲುವೆಯ ದಡದಲ್ಲಿ ಅಡಿಗಳನ್ನು ಮುಂದಿರಿಸಿದೆ. ಕಾಲುವೆ ೧೨–೧೫ ಅಡಿಗಳಷ್ಟು ಅಗಲವಿರಬಹುದು. ದಡಗಳು ಕುಸಿದು ಬೀಳದಂತೆ ಅಂದವಾಗಿ ಕೆತ್ತಿದ ಕಲ್ಲುಗಳನ್ನು ಕಟ್ಟಿದ್ದರು. ಬಯಲಾದುದರಿಂದ ನೀರು ಬಹು ನಿಧಾನವಾಗಿ ಹರಿಯುತಿದ್ದಿತು. ಕಾಲುವೆಯ ಎರಡು ದಡಗಳಲ್ಲಿಯೂ ವಿದ್ಯುತ್ಸ್ತಂಭಗಳಿದ್ದುವು. ತಂತಿಗಳ ಸಾಲೆರಡು ಕಣ್ಣು ತಲುಪುವ ತನಕ ಹಬ್ಬಿತ್ತು. ಈ ಜನರು ತಮ್ಮ ದೋಣಿಗಳನ್ನು ವಿದ್ಯುತ್ತಿನ ಶಕ್ತಿಯಿಂದ ನಡೆಸುತಿರುವರೆಂದು ನಾನು ಊಹಿಸಿದೆ.

“ ಕಾಲುವೆಯಲ್ಲಿ ದೋಣಿಯೊಂದು ಬಂದಿತು. ಅದರ ಕಡೆಗೆ ನನ್ನ ನೋಟ ಹರಿದಿತು. ದೋಣಿ ೨೦–೨೫ ಅಡಿ ಉದ್ದವಾಗಿದ್ದಿತು. ೮–೧೦ ಅಡಿಗಳಷ್ಟು ಅಗಲವಾಗಿದ್ದಿತು. ಅದು ನೋಡಲು ಎರಡು ಅಂತಸ್ತಿನ ಮನೆಯಂತಿದ್ದಿತು. ಎರಡು ನೆಲೆಗಳಲ್ಲಿಯೂ ಜನರು ತುಂಬಿದ್ದರು. ಅವರನ್ನು ನಾನು ಎವೆಯಿಕ್ಕದೆ ನೋಡಿದೆ. ಅವರ ಆಕಾರವೂ ಉಡುಪುಗಳೂ ಬಹು ವಿಚಿತ್ರವಾಗಿದ್ದುವು. ಅವರು ಐದು ಅಡಿಗಳಿಗಿಂತ ಹೆಚ್ಚು ಎತ್ತರವಾಗಿರಲಿಲ್ಲ. ಕಾಲುಗಳು ಬಹು ಗಿಡ್ಡವಾಗಿದ್ದು ಕೃಶವಾಗಿದ್ದುವು. ಅವರ ಒಡಲಾದರೋ ಬತ್ತಿದುದೇ. ತಲೆಯಾದರೋ ನಮ್ಮ ತಲೆಯ ಎರಡರಷ್ಟು ಇದ್ದಿತು. ಕೊರಳು ಕೊಕ್ಕರೆಯಂತೆ ನಸು ಉದ್ದವಾದುದು. ಬಾಯಿಯಲ್ಲಿ ಹಲ್ಲುಗಳೇ ಇರಲಿಲ್ಲ. ಕೈಗಳು ಮಾತ್ರ

ಕಡ್ಡಿಗಳಂತೆ ಸಪೂರವಾಗಿದ್ದು ಅಳತೆಗೆ ಮೀರಿ ಉದ್ದವಾಗಿದ್ದುವು. ಹೆಣ್ಣು ಗಂಡುಗಳ ವ್ಯತ್ಯಾಸವನ್ನು ಅರುಹುವ ಗಡ್ಡ ಮೀಸೆಗಳು ಅವರ ಮೊಗಗಳಲ್ಲಿರಲಿಲ್ಲ.

"ಅವರ ಆಕಾರದಂತೆ ಉಡುಪುಗಳಾದರೂ ವಿಚಿತ್ರವಾದುವುಗಳೇ. ಜಲ್ಲಣದಂತಹ ಒಂದು ಬಗೆಯ ಉಡಿಗೆಯನ್ನು ಅವರು ಉಟ್ಟಿದ್ದರು. ಆ ಉಡಿಗೆ ಅವರ ಮೊಣಕಾಲುತನಕ ತಲುಪುತಿದ್ದಿತು. ನಮ್ಮ ಜುಬ್ಬದ ಮಾದರಿಯ ಒಂದು ಬಗೆಯ ಉಡುಪನ್ನು ಅವರು ತೊಟ್ಟಿದ್ದರು. ಎರಡು ಭುಜಗಳಿಂದಲೂ ರೆಕ್ಕೆಗಳು ಜೋಲುತಿದ್ದುವು. ಜೋತ ರೆಕ್ಕೆಗಳೆರಡೂ ಜೋತು ಕಾಲುತನಕ ಮುಟ್ಟುತಿದ್ದುವು. ಉಡುಪುಗಳು ರೇಷ್ಮೆಯಂತೆ ಬಲು ನಯವಾದುವು; ಬಿಳಿಯ ವರ್ಣದುವು. ಪಾದಗಳನ್ನು ವಿಚಿತ್ರವಾದ ಒಂದು ಬಗೆಯ ಚಪ್ಪಲಿಗಳು ಮುಚ್ಚಿದ್ದುವು. ತಲೆಗೂದಲು ಕಪ್ಪು ವರ್ಣವಾದುದು. ಅವರು ಕೂದಲನ್ನು ಅಂದವಾಗಿ ಸಿಂಗರಿಸಿದ್ದರು. ಹಲವರ ತಲೆಗೂದಲು ಕೊರಳುತನಕ ಹಬ್ಬಿದ್ದಿತು. ಪಕ್ಷಿಗಳ ಮತ್ತು ಹೂವುಗಳ ಆಕಾರವುಳ್ಳ ಬಣ್ಣಬಣ್ಣದ ರಿಬ್ಬನುಗಳನ್ನು ತಲೆಗೆ ಕಟ್ಟಿಕೊಂಡಿದ್ದರು. ಈ ಬಗೆಯಲ್ಲಿ ಸಿಂಗರಿಸಿಕೊಂಡವರು ಮಹಿಳೆಯರೆಂದು ಅನಂತರ ನನಗೆ ಅರಿವಾಯಿತು. ತಲೆಗೆ ಸುತ್ತಿದ ರಿಬ್ಬನು, ಕೊರಳುತನಕ ಹಬ್ಬಿದ ತುರುಬು ಇವಲ್ಲದೆ ಹೆಣ್ಣುಗಂಡುಗಳನ್ನು ಗುರುತಿಸಲು ಇನ್ನಾವ ಕುರುಹುಗಳೂ ಇರಲಿಲ್ಲ.

"'ಹೊಯ್ ಹೊಯ್!' ಎಂಬ ಉದ್ಗಾರಗಳು ದೋಣಿಯಲ್ಲಿದ್ದ ಜನರ ಕೊರಳಿಂದ ಹೊಮ್ಮಿದುವು. ಹತ್ತೆಂಟು ಮಂದಿ ಕಿಲಕಿಲ ಎಂದು ಮಾತಾಡಿ ನನ್ನ ಕಡೆಗೆ ಬೆರಳು ತೋರಿಸುತಿದ್ದರು. ದೋಣಿಯಲ್ಲಿದ್ದ ನೂರಾರು ಮಂದಿಯ ಕಣ್ಣುಗಳು ನನ್ನ ಮೈಯಲ್ಲಿ ನಟ್ಟುವು. ಪ್ರತಿಯೊಬ್ಬರ ಮೊಗದಲ್ಲಿಯೂ ಭಯವಿಸ್ಮಯಗಳು ನೆರೆದಿದ್ದುವು. ಮೃಗಾಲಯದಲ್ಲಿಹ ಒಂದು ಅಪೂರ್ವ ಬಗೆಯ ಪ್ರಾಣಿಯನ್ನು ಜನರು ಕುತೂಹಲದಿಂದ ನೋಡುವಂತೆ ಅವರು ರೆಪ್ಪೆ ಮುಚ್ಚದೆ ನನ್ನನ್ನು ನಿರೀಕ್ಷಿಸುತಿದ್ದರು. ಪುನಃ ಕಿಲಕಿಲನೆ ತಮ್ಮೊಳಗೆ ಮಾತಾಡಿಕೊಳ್ಳುತಿದ್ದರು.

"ಅರೆಚಣದಲ್ಲಿಯೇ ದೋಣಿ ನಿಂತಿತು. ದೋಣಿಯೊಳಗಿಂದ ಹತ್ತಡಿ ಉದ್ದದ ಹಲಿಗೆಯೊಂದನ್ನು ನಾಲ್ಕು ಮಂದಿ ತೆಗೆದು ದೋಣಿಯಿಂದ ದಡಕ್ಕೆ ಚಾಚಿದರು. ದೋಣಿಯಿಂದ ದಡಕ್ಕೆ ಬರಲಿಹ ಹಾದಿಯಾಯಿತು. ನಾಲು

ಕ

ಮಂದಿ ದೋಣಿಯಿಂದಿಳಿದು ದಡಕ್ಕೆ ಬಂದರು. ಬಂದವರು ನನ್ನನ್ನು ಸುತ್ತು ಗಟ್ಟಿ ಬಳಸಿದರು. ಅಡಿಯಿಂದ ಹಿಡಿದು ಮುಡಿತನಕ ನನ್ನನ್ನು ಅವರು ನಿಟ್ಟಿಸಿದರು.

" ' ಮನುಷ್ಯಾ ' ಎಂದು ಒಬ್ಬ ನುಡಿದ.

" ' ಹಾಂ. ಮನುಷ್ಯಾ ! ' ಎಂಬ ಉಲಿ ಎರಡನೆಯವನ ಕೊರಳಿಂದ ಹೊರಹೊರಳಿತು.

" ನಾಲ್ವರೂ ಏಕಕಾಲದಲ್ಲಿ ಮಾತಾಡುತ್ತಿದ್ದರು. ಅವರಾಡುತಿದ್ದ ಭಾಷೆ ನಮ್ಮ ಬಳಕೆಯ ಕನ್ನಡವಲ್ಲ. ಆ ಕಾಲದಲ್ಲಿ ಕನ್ನಡ ಅಳಿದುಹೋಗಿತ್ತು. ಹಿಂದೂಸ್ಥಾನಿ ಜನತೆಯ ಭಾಷೆಯಾಗಿದ್ದಿತು. ಆದರೆ ಇಂದು ನಾವು ಉಪ ಯೋಗಿಸುತ್ತಿರುವ ಹಿಂದೂಸ್ಥಾನಿಗಿಂತ ವ್ಯತ್ಯಾಸವಾದುದು. ಹತ್ತರಲ್ಲಿ ನಾಲ್ಕು ಶಬ್ದಗಳು ನನಗೆ ಪರಿಚಯವಿಲ್ಲದುವು. ನಾನು ಹಿಂದೂಸ್ಥಾನಿ ಬಲ್ಲವನಾದುದ ರಿಂದ ಈ ಜನರೊಡನೆ ಮಾತುಕತೆ ನಡೆಸಲು ವಿಶೇಷ ಪ್ರಯಾಸವಾಗಲಿಲ್ಲ. ಭಾವನೆಯನ್ನು ಹೊರಗೆಡುಹಲು ಮಾತು ಸಿಗದಲ್ಲಿ ಸಂಜ್ಞೆಗಳನ್ನು ನಾನು ಉಪಯೋಗಿಸುತ್ತಿದ್ದೆ. ಒಬ್ಬನು ಬೆರಳುಗಳಿಂದ ಸಂಜ್ಞೆಮಾಡಿ ' ಎಲ್ಲಿಂದ ಬಂದೆ ? ' ಎಂದು ಪ್ರಶ್ನಿಸಿದ.

" 'ನನ್ನ ಊರು ಬಹು ದೂರ. ಈ ಊರಿನವನು ನಾನಲ್ಲ ' ಎಂದು ಬಾಯಲ್ಲಿ ಹೇಳಿ ನಾನು ಸಂಜ್ಞೆಗಳ ಮೂಲಕವೂ ಅರುಹಿದೆ.

" ' ದೋಣಿಗೆ ಬಾ. ' ಎಂದು ಒಬ್ಬ ಕಾಲುವೆಯ ನಡುವೆ ನಿಂತಿದ್ದ ದೋಣಿಯ ಕಡೆಗೆ ಬೆರಳು ತೋರಿಸುತ್ತಾ ನನ್ನನ್ನು ಆಮಂತ್ರಿಸಿದ.

" ಎರಡನೆಯವನು ಬಾ ಎಂದು ನನ್ನ ಕೈ ಹಿಡಿದು ಜಗ್ಗಿದ.

" ಅವರ ಆಮಂತ್ರಣವನ್ನು ಅಲ್ಲಗಳೆದಿದ್ದರೆ ನನ್ನನ್ನು ಅವರು ಬಲಾ ತ್ಕಾರವಾಗಿ ಸೆಳೆದೊಯ್ಯುತ್ತಿದ್ದರೇನೋ. ಆದರೆ ನಾನು ಅವರ ಅಪೇಕ್ಷೆಯನ್ನು ತಿರಸ್ಕರಿಸಲಿಲ್ಲ. ಕಾಲುವೆಯ ದಡವನ್ನು ಹಿಡಿದು ಸಾಗುವುದರ ಬದಲು ಈ ವಿಚಿತ್ರ ಸಂಗಾತಿಗಳೊಡನೆ ತೆರಳಿದರೆ, ಊರಿಗೆ ಬೇಗ ತಲುಪಬಹುದೆಂದು ನಾನು ಆಲೋಚಿಸಿದೆ. ಆದುದರಿಂದ ನಾನು ಅವರ ಅಪೇಕ್ಷೆಯಂತೆ ದೋಣಿಗೆ ತೆರಳಿದೆ. ದೋಣಿಯೊಳಗೆ ಕಾಲಿಕ್ಕುತ್ತಲೆ, ಅದರೊಳಗಿದ್ದ ಮಂದಿಯೆಲ್ಲ ನನ್ನ ಸುತ್ತಿಕೊಂಡರು. ನನ್ನ ಮೈ-ಕೈ-ಕಾಲುಗಳನ್ನು, ಅಂಗಾಂಗಗಳನ್ನು ಪರೀಕ್ಷಿಸಿ

ಅವರಂತೆಯೇ ನಾನಾದರೂ ಮನುಷ್ಯ ಪ್ರಾಣಿಯಿರುವೆನೆಂದು ಖಚಿತಪಡಿಸಿಕೊಂಡರು.

"ಅವರ ಪೈಕಿ ಒಬ್ಬ ನನಗೆ ಕುಳಿತುಕೊಳ್ಳಲು ಎಡೆಮಾಡಿಕೊಟ್ಟ. ದೋಣಿ ತುಂಬ ತೂಗು ಬೇಂಚುಗಳಿದ್ದುವು. ಅವುಗಳನ್ನು ಕಬ್ಬಿಣದಿಂದಾಗಲೀ ಕಟ್ಟಿಗೆಯ ತುಂಡುಗಳಿಂದಾಗಲೀ ತಯಾರಿಸಿರಲಿಲ್ಲ. ಬಹು ನಯವಾದ ಸಣ್ಣ ತಂತಿಗಳಿಂದ ಅವುಗಳನ್ನು ತಯಾರಿಸಿದ್ದರು. ಅಲ್ಲಲ್ಲಿ ಬೇಂಚುಗಳಿಗೆ ಆಧಾರವಾಗಿ ಅಲುಮಿನಿಯಮ್ಮಿನ ಕಿರಿಯ ಕಾಲುಗಳು ನಿಂತಿದ್ದುವು. ಮೇಲೆ ಬಣ್ಣಬಣ್ಣದ ಹೂ ಹಕ್ಕಿಗಳ ಆಕಾರಗಳಿಂದ ಕೂಡಿದ ಒಂದು ಹೊದಿಕೆಯಿದ್ದಿತು. ಈ ಬೇಂಚುಗಳ ಮೇಲೆ ಕುಳ್ಳಿರುವುದು ಬಹು ಹಿತಕರವಾಗಿದ್ದಿತು. ಈ ಬೇಂಚುಗಳು ನಮ್ಮ ಸೋಫಗಳನ್ನು ಹೋಲುತ್ತಿದ್ದುವು ಆದರೆ ರಚನಾಕ್ರಮ ಬೇಂಚುಗಳಿಗಿಂತ ಎಷ್ಟೋ ಸುಲಭವಾದುದು.

"ದೋಣಿ ಕಾಲುವೆಯಲ್ಲಿ ಮುಂದೆ ಸಾಗಿತು. ಜನ ಗಜಬಿಜಿಯಿಂದ ಸಂಭಾಷಣೆಯಲ್ಲಿ ನಿರತರಾಗಿದ್ದರು. ಅವರ ಮಾತುಕತೆಗಳು ನನ್ನ ಕುರಿತು ಆಗಿದ್ದುವೆಂದು ಬೇರೆ ಹೇಳಬೇಕಾಗಿಲ್ಲ. ನನ್ನ ಆಕಾರ ರೂಪು ಉಡುಪುಗಳಿಂದ ನಾನು ಈ ಲೋಕದ ಮನುಷ್ಯನಲ್ಲವೆಂದು ಅವರು ಖಚಿತಪಡಿಸಿದ್ದರು. ಬೇರೊಂದು ಗ್ರಹದಿಂದ ದಾರಿ ತಪ್ಪಿ ಭೂಮಿಗಿಳಿದವನು ನಾನಾಗಿರಬೇಕೆಂದು ಅವರ ಊಹೆಯಾಗಿತ್ತು. ಅವರ ಮಾತಿನ ಸರಣಿಯಿಂದ ನನಗೆ ಹಾಗೆನಿಸಿತು.

"ಕೆಲ ನಿಮಿಷಗಳಲ್ಲಿ ದೋಣಿ ಒಂದು ನಗರವನ್ನು ಸೇರಿತು. ನಗರದ ಹೊರಗೆ ನಾಲ್ಕಾರು ಕಾಲುವೆಗಳು ಒಂದುಗೂಡಿ ಜತೆ ಸೇರಿದ್ದುವು. ಈ ಕಾಲುವೆಗಳಲ್ಲಿ ಹತ್ತೆಂಟು ದೋಣಿಗಳು ಬರುತ್ತಿದ್ದುವು, ಹೋಗುತ್ತಿದ್ದುವು. ದೋಣಿ ದಡಕ್ಕೆ ಬಂದು ಸೇರಿತು. ದೋಣಿಯಿಂದ ಇಳಿದು ಹೋಗಲು ಶಿಲಾನಿರ್ಮಿತವಾದ ಒಂದು ಕಿರುದಾರಿಯಿದ್ದಿತು. ಜನರು ಒಬ್ಬೊಬ್ಬರಾಗಿ ದೋಣಿಯಿಂದಿಳಿದು ದಡ ಸೇರಿದರು. ನಾನಾದರೂ ಅವರನ್ನು ಹಿಂಬಾಲಿಸಿದೆ. ನಾನು ಸಂಗಡವಿರುವುದನ್ನು ಮರೆತವರಂತೆ ಅವರು ಬೇರೆ ಬೇರೆ ಹಾದಿಗಳನ್ನು ಹಿಡಿದು ಸಾಗಿದರು. ಎತ್ತ ಹೋಗುವುದೆಂಬುದನ್ನು ತಿಳಿಯದೆ ಮೂಢನಂತೆ ನಾನು ಹಿರಿಯ ಕಾಲುವೆಯ ದಡದಲ್ಲಿ ನಿಂತೆ.

"ಕೊನೆಗೆ ದೋಣಿಯಿಂದಿಳಿದ ವ್ಯಕ್ತಿಯೊಂದು ನನ್ನ ಬಳಿಗೆ ಚಲಿಸಿತು. ತಲೆಗೆ ಸುತ್ತಿದ ರಿಬ್ಬನು, ಕೊರಳುತನಕ ಪಸರಿಸಿದ ತುರುಬು, ನಸು ಉಬ್ಬಿದ

ಎಡೆ ಇವುಗಳಿಂದ ಆಕೆ ಒಬ್ಬ ಮಹಿಳೆಯೆಂದರಿಯಲು ನನಗೆ ಪ್ರಯಾಸವೆನಿಸ ಲಿಲ್ಲ. ಆಕೆಯ ಕೆನ್ನೆಗಳು ಕೆತ್ತಳೆ ಬಣ್ಣದಿಂದ ಕೂಡಿದುವು. ಕಣ್ಣುಗಳು ಅಗಲ ವಾದುವುಗಳು. ಹರಯ ಇಪ್ಪತ್ತನೆಯ ಮನೆಯನ್ನು ದಾಟಿರದು. ಆಕೆ ತನ್ನ ಪುಟ್ಟ ಪುಟ್ಟ ಕಾಲುಗಳಿಂದ ಬೇಗಬೇಗನೆ ಹೆಜ್ಜೆ ಹಾಕುತ್ತಿದ್ದಳು. ನನ್ನನ್ನು ಕಾಣಲು ಆಕೆಯ ಕೆಂದುಟಿಗಳು ಚಲಿಸಿದುವು. ತುಟಿಗಳಿಂದ ಹರಿಯುತಿದ್ದ ಮಾತುಗಳೊಡನೆ ಬೆರಳುಗಳ ಸಂಜ್ಞೆಗಳೂ ಬೆರೆತುವು. "ಎಲ್ಲಿಗೆ ತೆರಳು ತಿರುವೆ?" ಎಂದು ಅವಳು ನನ್ನನ್ನು ಪ್ರಶ್ನಿಸಿದಳು.

"ಎಲ್ಲಿಗೆಂದು ನನಗೇ ತಿಳಿಯದು. ಈ ಊರಿಗೆ ನಾನು ಅಪರಿಚಿತ." ಎಂದು ನಾನು ಮಾತಿನೊಡನೆ ಸಂಜ್ಞೆಗಳನ್ನು ಬೆರಸುತ್ತಾ ಅರುಹಿದೆ.

"ನನ್ನ ಸಂಗಡ ಬಾ" ಎಂದು ಅವಳು ನನ್ನನ್ನು ಆಮಂತ್ರಿಸಿದಳು. ಸಂತೋಷದಿಂದ ಆಕೆಯ ಕರೆಯನ್ನು ಒಪ್ಪಿದೆ. ಬೀದಿಯ ಹಾದಿಯನ್ನು ನಾವು ಹಿಡಿದೆವು. ಆಕೆ ಮುಂತೆರಳುತಿದ್ದಳು. ತಾಯಿಯನ್ನು ಹಿಂಬಾಲಿಸುವ ಎಳೆಗರುವಿನಂತ ನಾನು ಅನುಸರಿಸುತಿದ್ದೆ. ಅಗಲವಾದ ಬೀದಿಗಳು. ಸೀಮೆಂಟು ಹಾಸಿದ ನೆಲ. ಅದು ನುಣುವಾಗಿ ಗಾಜಿನಂತೆ ಮಿನುಗುತಿದ್ದಿತು. ಎಲ್ಲಿ ಜಾರಿ ಬೀಳುವೆನೋ ಎಂಬ ಅಂಜಿಕೆಯಿಂದ ನಾನು ಮೆಲ್ಲನೆ ಅಡಿಗಳನ್ನಿರಿಸುತಿದ್ದೆ. ಇಕ್ಕಡೆಗಳಲ್ಲಿಯೂ ಮೂರು ನಾಲ್ಕು ಅಂತಸ್ತುಗಳುಳ್ಳ ಕಟ್ಟಡಗಳಿದ್ದುವು. ಕಟ್ಟಡಗಳೆಲ್ಲ ಒಂದೇ ಬಗೆಯವು. ಕಟ್ಟಡಗಳೊಳಗೆ, ಹೊರಗೆ ಜಗಲಿಗಳಲ್ಲಿ ಜನರು ನೆರೆದಿದ್ದರು. ಅವು ಅಂಗಡಿಮನೆ, ಭಂಡಸಾಲೆಗಳಂತೆ ನನಗೆ ತೋರ ಲಿಲ್ಲ. ಎಲ್ಲವೂ ಜನರು ವಾಸಗೈಯುತಿದ್ದ ಬಿಡಾರಗಳಾಗಿದ್ದುವು. ಬೀದಿಯಲ್ಲಿ ಸಂಚರಿಸುತಿದ್ದವರು, ಮನೆಗಳ ಉಪ್ಪರಿಗೆಗಳ ಮೇಲೆ ನೆರೆದಿದ್ದವರು ಕೌತುಕದ ಕಣ್ಣುಗಳಿಂದ ನನ್ನನ್ನು ನೋಡುತಿದ್ದರು. ಹತ್ತಾರು ಮಂದಿ ನಮ್ಮನ್ನು ಅನು ಸರಿಸಿ ಬರುತಿದ್ದರು. ನಾನು ಯಾವ ಬಗೆಯ ಪ್ರಾಣಿಯೆಂದು ಹಲವರು ನನ್ನ ಜತೆಗಾತಿಯನ್ನು ಪ್ರಶ್ನಿಸದಿರಲಿಲ್ಲ. "ಬೇರೊಂದು ಗ್ರಹದಿಂದ ಬಂದ ಮನುಷ್ಯ ಜೀವಿ" ಎಂದು ನನ್ನ ಮಾರ್ಗದರ್ಶಿನಿ ಉಸುರಿ ಅವರ ಆತಂಕ ಗಳನ್ನು ಸಮಾಧಾನಿಸುತಿದ್ದಳು. ದೋಣಿಯಲ್ಲಿ ನನ್ನನ್ನು ನೋಡಿದ ಹಲವರು ಮಾಡಿನ ಊದ ಬಟ್ಟೆವೆಂದು ಆಕ ಎಣಿಸಿದ್ದಳು. ಆಕೆಗಿಂತಲೂ ನಲವತ್ತು ವರುಷಗಳು ಹಿರಿಯನೆನಿಸಿದ ಮುತ್ತಾತನ ಸಂಗಡ ತಾನು ಬೀದಿಯಲ್ಲಿ ಸಂಚರಿ ಸುತಿರುವೆನೆಂಬುದನ್ನು ಆಕೆ ಅರಿಯಳು.

ನಗರ ಜನಸಂಪನ್ನವಾಗಿದ್ದರೂ ಬೀದಿಯಲ್ಲಿ ಸಂಚಾರಕ್ಕೆ ಅಗತ್ಯವೆನಿಸಿದ ವಾಹನಗಳು ಬಹು ವಿರಳವಾಗಿದ್ದುವು. ಮೋಟಾರು ಕಾರುಗಳಾಗಲಿ ಅವುಗಳ ಮರಿಗಳೆನಿಸಿದ ಸೈಕಲ್ಲು ಮೋಟಾರು ಬೈಸಿಕಲ್ಲುಗಳಾಗಲೀ ಬೀದಿಯಲ್ಲಿ ಓಡಾಡುತಿರಲಿಲ್ಲ. ನೆಲದ ಮೇಲೆ ಬಳಕೆಯಲ್ಲಿದ್ದ ಹಲವು ವಾಹನಗಳು ಕಾಲನ ಹೊಟ್ಟೆಯಲ್ಲಿ ಅಡಗಿ ಹೋಗಿರಬೇಕೆಂದು ನಾನು ಎಣಿಸಿದೆ. ನನ್ನ ಊಹೆ ನಿಜವಾದುದಾಗಿತ್ತು.

ಅರ್ಧ ಮೈಲು ದೂರ ಹೋದಾಗ ಎಲ್ಲದಕ್ಕಿಂತಲೂ ಹಿರಿಯದೆನಿಸಿದ ಕಟ್ಟಡವೊಂದು ನನ್ನ ಕಣ್ಣುಗಳನ್ನು ಸೆಳೆದಿತು. ಅದು ನಾನೂರು ಗಜಗಳಿಗಿಂತ ಹೆಚ್ಚು ಉದ್ದವಾದುದಾಗಿತ್ತು. ಹತ್ತು ಅಂತಸ್ತುಗಳಿದ್ದುವು. ಅದರ ಮೇಲ್ಚಾವಣಿಯಲ್ಲಿ ತುಂಬಾ ಜನರು ನೆರೆದಿದ್ದರು. ಮೇಲ್ಚಾವಣಿಯಲ್ಲಿ ನಲವತ್ತು ಗಜ ದೂರಗಳಲ್ಲಿ ಹತ್ತೆಂಟು ಪಾತಗಳನ್ನು ನಿರ್ಮಿಸಿದ್ದರು. ಈ ಪಾತಗಳು ಬಂದರುಗಳಲ್ಲಿ ನಿರ್ಮಿಸಿದ್ದ ಪಿಯರುಗಳನ್ನು ಹೋಲುತಿದ್ದುವು. ಈ ಪಾತಗಳು ಇಪ್ಪತ್ತೈದು ಮೂವತ್ತು ಗಜಗಳಷ್ಟು ಉದ್ದವಾಗಿದ್ದುವು. ಅವುಗಳಿಗೆ ಆಧಾರವಾಗಿ ಕೆಳಗೇನೂ ಇರಲಿಲ್ಲ. ಈ ಪಾತಗಳ ನಿರ್ಮಾಣ ರೀತಿ ತುಂಬಾ ಸೋಜಿಗವಾದುದಾಗಿದ್ದಿತು. ಈ ಪಾತಗಳ ಉಪಯೋಗವೇನೆಂಬುದು ನನಗೆ ತಿಳಿಯಲಾಗಲಿಲ್ಲ. ನನ್ನ ಮಾರ್ಗದರ್ಶಿನಿಯ ಕೈ ಹಿಡಿದು ಆಕೆಗೆ ಈ ಪಾತಗಳನ್ನು ತೋರಿಸಿದೆ. ಅದರ ಉಪಯೋಗವೇನೆಂದು ಹಿಂದೂಸ್ಥಾನಿಯಲ್ಲಿ ಪ್ರಶ್ನಿಸಿದೆ

ಆಕಾಶದೆಡೆಗೆ ಬೆರಳು ತೋರಿಸಿ ಆಕೆ ಮಾತನಾಡಿದಳು. ಅವಳ ಮಾತು ನನಗೆ ಸರಿಯಾಗಿ ಅರ್ಥವಾಗಲಿಲ್ಲ. ಮೇಲ್ಚಾವಣಿಯನ್ನು ನಾನು ಪುನಃ ನೋಡಿದೆ. ಅಲ್ಲಿ ಜನರು ಉತ್ತರ ದಿಕ್ಕನ್ನು ದಿಟ್ಟಿಸಿ ನೋಡುತಿದ್ದರು. ತಗ್ಗಿನಲ್ಲಿದ್ದ ನನಗೆ ಅವರೇನು ನೋಡುತಿರುವರೆಂದು ಅರಿವಾಗಲಿಲ್ಲ. ಕೆಲ ನಿಮಿಷಗಳಲ್ಲಿಯೇ ಮೋಟಾರು ಕಾರಿನಂತಹ ಸದ್ದು ನನಗೆ ಕೇಳಿಸಿತು. ಕಾರು ಬರಬಹುದೆಂಬ ಹೆದರಿಕೆಯಿಂದ ನಾನು ಹಾದಿಯ ಪಕ್ಕಕ್ಕೆ ಸರಿದೆ. ಆದರೆ ಬರುತಿದ್ದುದು ಮೋಟಾರಲ್ಲ. ಆಗಸದಲ್ಲಿ ವಿಮಾನವೊಂದು ಬರುತಿದ್ದಿತು. ಕಟ್ಟಡದ ಮೇಲ್ಚಾವಣಿಯಲ್ಲಿ ನೆರೆದ ಮಂದಿ ಅದರ ಬರವನ್ನೇ ನಿಟ್ಟಿಸುತಿದ್ದರು. ಪಯಣಕ್ಕೋಸುಗ ಆಕಾಶಯಾನವನ್ನು ಕಾದು ನಿಂತಿದ್ದ ಪ್ರವಾಸಿಗರವರು. ಅವರು ನೆರೆದ ಮೇಲ್ಚಾವಣಿ ವಿಮಾನ ನಿಲ್ದಾಣವಾಗಿದ್ದಿತು. ವಿಮಾನದ ಗತಿ

ಮಂದವಾಯಿತು. ಅದು ಮೆಲ್ಲನೆ ಬಂದು ನಿಲ್ದಾಣದ ಅಂಚಿನಲ್ಲಿ ನಿಂತಿತು. ಅದರ ಕದಗಳನ್ನು ತೆರೆದು ಇಳಿಯಲು ಏಣಿಗಳನ್ನು ಪಾತಗಳಿಗೆ ಕೆಲಸಗಾರರು ಜೋಡಿಸಿದರು. ಹಲವರು ವಿಮಾನಗಳಿಂದ ಇಳಿಯತೊಡಗಿದರು. ಮೇಲ್ಚಾವಣಿಯಲ್ಲಿ ನೆರೆದ ಯಾತ್ರಿಕರು ವಿಮಾನದ ಬಳಿಗೆ ಸರಿದರು. ಇನ್ನೊಂದೆಡೆಯಲ್ಲಿ ಯಂತ್ರಗಳ ಮೂಲಕ ಸರಕುಗಳನ್ನು ವಿಮಾನದಿಂದ ಕೆಳಗಿಳಿಸುತಿದ್ದರು; ಮೇಲೆ ಹತ್ತಿಸುತಿದ್ದರು. ನೂರಾರು ಮಂದಿ ಅತ್ತಲಿಂದಿತ್ತ ಓಡಾಡುತಿದ್ದರು; ಗಜಬಿಜಿ ಮಾತಾಡುತಿದ್ದರು. ಆದರೆ ನಮ್ಮ ರೈಲ್ವೆ ನಿಲ್ದಾಣಗಳಲ್ಲಿ ತೋರಿಬರುವ ಕೋಲಾಹಲ ಅಬ್ಬರಗಳಿಲ್ಲ; ನೂಕು ನುಗ್ಗಗಳಿಲ್ಲ. ಪಯಣಿಗರು ಒಂದು ಕ್ರಮವನ್ನು ಅನುಸರಿಸುತಿದ್ದರು. ಇತರರಿಗೂ ಹತ್ತಲು ಇಳಿಯಲು ಅವಕಾಶ ಒದಗಿಸುತಿದ್ದರು.

ಸರಕುಗಳನ್ನು ಹತ್ತಿಸುವುದು ಇಳಿಸುವುದು, ಪಯಣಿಗರು ಏರುವುದು ಇಳಿಯುವುದು ಮೊದಲಾದ ಕೆಲಸಗಳು ನಾಲ್ಕು ನಿಮಿಷಗಳಿಗಿಂತ ಹೆಚ್ಚು ವೇಳೆ ತೆಗೆದುಕೊಳ್ಳಲಿಲ್ಲ. ಬೃಹದಾಕಾರದ ಆಕಾಶನೌಕೆ ಮರಳಿ ಹೊರಟಿತು; ತನ್ನ ಪಯಣವನ್ನು ಮುಂದುವರಿಸಿತು.

" ಈ ಬಗೆಯ ವಾಹನಗಳನ್ನು ನೀವು ಉಪಯೋಗಿಸುವಿರಾ ? " ಜತೆಗಾತಿಯನ್ನು ನಾನು ಪ್ರಶ್ನಿಸಿದೆ.

" ಹೂಂ. " ಎಂದಳಾಕೆ.

" ನೆಲದ ಮೇಲೆ ಸಂಚರಿಸುವ ವಾಹನಗಳಿಲ್ಲವೇ ? "

" ಬಿಂಗಾಮುಗಳಿವೆ. "

" ನಿನ್ನ ಹೆಸರು. "

" ಮೀನಾ. "

" ತಾಯಿತಂದೆಗಳು ಇರುವರೆ ? ನಿನ್ನ ಮನೆ ಇಲ್ಲಿಂದ ದೂರವೆ ? "

ನಮ್ಮ ಮಾತುಕತೆಗಳು ಹಿಂದೂಸ್ಥಾನಿಯಲ್ಲಿ ನಡೆದುವು ಎಂದು ಹೇಳಬೇಕಾಗಿಲ್ಲ. ನನ್ನ ನುಡಿ ಆಕೆಗೆ ತಿಳಿಯದಲ್ಲಿ ಸಂಜ್ಞೆಗಳನ್ನು ಉಪಯೋಗಿಸಿದೆ. ನನ್ನ ಕೊನೆಯ ಪ್ರಶ್ನೆಗೆ ಮೀನಾ ಉತ್ತರ ಹೇಳಲಿಲ್ಲ. ತನ್ನ ತಾಯಿತಂದೆಯರು ಯಾರೆಂದು ತಿಳಿಸಲೂ ಇಲ್ಲ. ವಿಸ್ಮಯ ಬೆರೆತ ಕಣ್ಣುಗಳಿಂದ ನನ್ನ ಮೊಗವನ್ನೊಮ್ಮೆ ನೋಡಿದಳು. ಮಾರುಕೊಡದೆ ಮುಂದೆ ಅಡಿಗಳನ್ನಿರಿಸಿದಳು.

ನಾನು ಬೀದಿಯಲ್ಲಿ ಬಹು ಮಂದಿಯನ್ನು ನೋಡಿದೆನಾದರೂ ಹದಿನೆಂಟು ವರುಷ ಪ್ರಾಯದ ಕೆಳಗಿನವರನ್ನು ಕಾಣಲಿಲ್ಲ. ಅಂತೆಯೇ ಎಪ್ಪತ್ತು ವರುಷಕ್ಕೆ ಮಿಕ್ಕಿದ ವೃದ್ಧರ ಸುಳಿವೂ ಇರಲಿಲ್ಲ. ಹಸುಳೆಗಳೂ, ಮುದುಕರೂ ಇಲ್ಲದ ಚಿರ ಯೌವನದ ಸಮಾಜ ಇದಾಗಿರಬಹುದೇ ಎಂಬ ಆಲೋಚನೆಯ ಕಣವೊಂದು ನನ್ನ ಚಿತ್ತದಲ್ಲಿ ತೇಲಿತು. ಆ ಊಹೆ ನಿಜವಾದುದಾಗಿದ್ದರೆ ಮಾನವನ ಎಸಕಗಳಲ್ಲಿ ಅತ್ಯದ್ಭುತವಾದುದು ಅದಾಗಿರಬೇಕೆಂದು ನಾನು ನೆನಸಿದೆ.

" ಊರಲ್ಲಿ ಮಕ್ಕಳಿಲ್ಲವೇ ? " ನಾನು ತುಟಿ ಬಿಚ್ಚಿದೆ.

ಮೀನಳ ತುಟಿಗಳ ಮೇಲೆ ಎಳೆನಗೆಯ ಮಂದಾನಿಲ ಸುಳಿದಿತು. ಆ ನಗೆಯಲ್ಲಿ ಆಕೆಯ ಹೆಣ್ತನ ಹುದುಗಿರುವುದನ್ನು ನಾನು ಕಾಣದಿರಲಿಲ್ಲ. " ಅಲ್ಲಿದಾರೆ. " ಎಂದು ದೂರದ ಒಂದೆಡೆಗೆ ಆಕೆ ಬೆರಳುಮಾಡಿ ತೋರಿಸಿದಳು. ಹರೆಯದವರ ನಡುವೆ ವಾಸಿಸಲು ಎಳೆಯರಿಗೆ ಹಕ್ಕಿಲ್ಲ. ಅವರಿಗೆ ಪ್ರತ್ಯೇಕವಾದ ವಸತಿಗಳನ್ನು ಆ ಸಮಾಜ ಏರ್ಪಡಿಸಿದ್ದಿತು. ತಮ್ಮ ವಾಸಕ್ಕೋಸುಗ ಏರ್ಪಡಿಸಿದ ಶಿಕ್ಷಣ ಕೇಂದ್ರಗಳನ್ನು ಬಿಟ್ಟು ಇತರ ಜನರೊಡನೆ ಬೆರೆಯಲು ಎಳೆಯರಿಗೆ ಅವಕಾಶವೇ ಇರಲಿಲ್ಲ. ಹಸುಳೆಗಳಿಂದ ತಮ್ಮ ಸ್ವಾತಂತ್ರ್ಯ ಸ್ವೈರ ವಿಹಾರಗಳಿಗೆ ತಡೆಯುಂಟಾಗುತ್ತಿದೆಯೆಂದು ಆ ಕಾಲದ ಪ್ರೌಢರು ಈ ಉಪಾಯವನ್ನು ಕೈಗೊಂಡಿದ್ದರು.

" ಮುದುಕರು ನಿಮ್ಮೊಡನೆಯಲ್ಲಿಲ್ಲವೇ ? ನೀವು ಮುಪ್ಪನ್ನು ಗೆದ್ದಿರುವಿರಾ ? "

ಮೀನಾ ನುಡಿಯಲಿಲ್ಲ. ಚಿತ್ತಳಿ ಬಣ್ಣದ ಆಕೆಯ ಕೆನ್ನೆಗಳು ಕಂದಿದುವು. ಕಣ್ಣುಗಳು ಕಿರಿದಾದುವು. ಚಿಂತೆಯ ನೆರಳು ಮೊಗವನ್ನು ಕವಿದಿತು. ತಲೆಯ ಮೇಲೆ ಹಾದು ಹೋಗುತಿದ್ದ ವಿದ್ಯುತ್ತಿನ ತಂತಿಯ ಕಡೆಗೆ ಬೆರಳು ತೋರಿಸಿ " ಅದು ಅವರನ್ನು ಇಲ್ಲವಾಗಿಸುವುದು. " ಎಂದು ಅವಳು ನುಡಿದಳು. ಆಕೆಯ ನುಡಿಗೇಳಿ ನನಗೆ ಆಶ್ಚರ್ಯವೆನಿಸಿತು. ಸಮಾಜ ಪೂರ್ಣ ಸ್ವಾತಂತ್ರ್ಯವನ್ನು ಅನುಭವಿಸುತಿದ್ದ ಪರಿಪಕ್ವ ಜೀವಿಗಳ ಆಗರವೆಂದು ಹೊರ ತೋರಿಕೆಗೆ ಕಂಡುಬಂದರೂ, ಸಮಾಜದಲ್ಲಿ ವ್ಯಕ್ತಿಗಳಿಗೆ ಹೆಚ್ಚಿನ ಸ್ವಾತಂತ್ರ್ಯವಿರಲಿಲ್ಲ. ಸಮಾಜದ ಸರ್ವ ಅಧಿಕಾರಗಳೂ ವೈಜ್ಞಾನಿಕರ ಕೈಗಳಲ್ಲಿ ನೆಲಸಿದ್ದುವು. ವೈಜ್ಞಾನಿಕನು ಎಳೆದ ಗೆರೆಯನ್ನು ವ್ಯಕ್ತಿ ದಾಟುವಂತಿರಲಿಲ್ಲ. ಅವನ ಬದುಕು, ಆಹಾರ, ಸುಖಸಂತೋಷಗಳು, ಇವೆಲ್ಲ ವಿಜ್ಞಾನಿಯ ಅಂಕೆಗೆ

ಒಳಗಾಗಿದ್ದುವು. ವಿಜ್ಞಾನಿ ನಿರ್ಮಿಸಿದ ಕಾಯಿದೆ ಕಟ್ಟಳೆಗಳನ್ನು ಮೀರಿದ ವ್ಯಕ್ತಿಗೆ ಸಮಾಜದಲ್ಲಿ ಜೀವಿಸುವ ಹಕ್ಕೇ ಇರಲಿಲ್ಲ. ಅವನ ಬದುಕನ್ನು ವಿಜ್ಞಾನಿಯ ನಿಯಮ ಮಾಲಿಕೆಗಳು ಕೊನೆಗೊಳಿಸುತ್ತಿದ್ದುವು. ವಿಜ್ಞಾನಿ ನಿಶ್ಚಯಿಸಿದ ಪ್ರಾಯದ ಗೆರೆಯನ್ನು ಮೀರಿದವರನ್ನು ವಿದ್ಯುತ್ ಇಲ್ಲವೇ ವಿಷಾನಿಲಗಳು ಇಲ್ಲವಾಗಿಸುತ್ತಿದ್ದುವು. ಈ ನಿಯಮವನ್ನು ಪ್ರತಿಯೊಂದು ವ್ಯಕ್ತಿಯೂ ಬಲ್ಲುದು. ಕೊನೆಗೆ ವಿದ್ಯುತ್ತಿನ ಪ್ರವಾಹಕ್ಕೆ ಮೈಯೊಡ್ಡಿ ಪ್ರಾಣಬಿಡುವುದು ತಮಗೆ ಕಟ್ಟಿಟ್ಟ ಗಂಟು ಎಂಬ ಆಲೋಚನೆ ಪ್ರತಿಯೊಬ್ಬ ಮನುಷ್ಯನ ಬುದ್ಧಿಯನ್ನೂ ಕೆಣಕುತಲಿದ್ದಿತು. ಆದುದರಿಂದಲೇ ಮುದುಕರ ಪ್ರಸ್ತಾಪವನ್ನು ನಾನೆತ್ತಿದಾಗ ಮೀನಳ ಮೊಗ ಬಾಡಿದುದು.

ಈಗ ನಾವು ಭೋಜನ ವಸತಿಯೊಂದನ್ನು ಸುಗ್ಗಿದೆವು. ವಿಶಾಲವಾದ ನಡುಮನೆಯದು. ಸಾಲುಸಾಲಾಗಿ ಗಾಜಿನ ಮೇಜಗಳಿದ್ದುವು. ಕುಳ್ಳಿರಲು ಕಿರುತಂತಿಗಳನ್ನು ಹೆಣೆದು ಮಾಡಿದ ಸೋಫಾಗಳು. ಊಟಕ್ಕೋಸುಗ ಬಹುಮಂದಿ ನೆರೆದಿದ್ದರು. ಮೇಜಗಳ ಮುಂದೆ ಕುಳಿತಿದ್ದರು. ಆಳುಗಳು ಪ್ರತಿಯೊಬ್ಬನ ಮುಂದೆಯೂ ತಿನಸುಗಳ ತಟ್ಟೆಗಳನ್ನು ತಂದಿರಿಸುತ್ತಿದ್ದರು. ಮೀನಾ ಒಂದೆಡೆಯಲ್ಲಿ ಸ್ಥಳಮಾಡಿ ನನ್ನನ್ನು ಕುಳ್ಳಿರಿಸಿ, ಪಕ್ಕದಲ್ಲಿಯೇ ತಾನೂ ಮಂಡಿಸಿದಳು. ಆಳೊಬ್ಬ ನಮ್ಮ ಮುಂದೆಯೂ ತಿನಸುಗಳ ತಟ್ಟೆಗಳನ್ನು ತಂದಿರಿಸಿ ಹೊರಟುಹೋದ. ಎಲ್ಲ ತಟ್ಟೆಗಳ ಮೇಲಿದ್ದ ತಿನಸುಗಳೂ ಒಂದೇ ಬಗೆಯವು. ಅಂಗೈಯಗಲದ ಮೂರು ಬಿಸ್ಕೆಟ್ಟುಗಳಿದ್ದುವು. ಅವುಗಳ ಬಣ್ಣ ನಸು ಹಳದಿ. ಕೆಂಪು ಬಣ್ಣದ ಗೋಲಿಗಳಂತಿಹ ಮೂರು ಗುಳಿಗೆಗಳು.

ನಾನು ಬಿಸ್ಕೆಟ್ಟೊಂದನ್ನು ತೆಗೆದು ಬಾಯೊಳಗೆ ಹಾಕಿದೆ. ಅದು ಆವ ಬಗೆಯ ವಾಸನೆಯುಳ್ಳದ್ದೂ ಆಗಿರಲಿಲ್ಲ. ರುಚಿ ಮಾತ್ರ ನಸು ಸಿಹಿ. ಅದನ್ನು ನಾನು ಜಗಿಯಬೇಕಾಗಿ ಬರಲೇ ಇಲ್ಲ. ಬಾಯಲ್ಲಿ ಇರಿಸುವ ಮುನ್ನ ಅದು ಕರಗಿ ನೀರಾಗಿ ಹೋಯಿತು. ಉಂಡೆಗಳು ತುಸ ಕಾರವಾಗಿದ್ದುವು. ಒಣ ಶುಂಠಿಯ ಪರಿಮಳವಿತ್ತು. ಅವಾವರೂ ನಾಲಗೆಯ ಮೇಲೆ ಇರಿಸುವುದೇ ತಡ, ಕರಗಿ ನೀರಾದುವು.

"ಯಾವಾಗಲೂ ಇದೇ ಬಗೆಯ ಆಹಾರವನ್ನೇ ನೀವು ತೆಗೆದುಕೊಳ್ಳುವುದೇ ?" ನಾನು ಮೀನಾಳ ಮೊಗ ನೋಡಿದೆ.

"ಹೂಂ" ಎಂದಳಾಕೆ. "ನಮಗೆ ಇಷ್ಟವೆನಿಸಿದ ತಿಂಡಿಗಳನ್ನು ತಿನ್ನಲು

ಬರುವುದಿಲ್ಲ. ತಿನ್ನಲು ಇಷ್ಟವಿರುವಂತಹ ಆಹಾರ ಸಾಧನಗಳು ದೊರಕುವುದೂ ಇಲ್ಲ. ನಮ್ಮ ಆಹಾರ ಆವ ಬಗೆಯದಿರಬೇಕೆಂದು ವಿಜ್ಞಾನಿಗಳು ನಿಶ್ಚಯಿಸಿದಾರೆ. ನಮ್ಮ ಜೀವಿಗೆ ಅಗತ್ಯವೆನಿಸಿದ ಪ್ರೋಷಕಾಂಶಗಳ ಪ್ರಮಾಣಗಳಿಗೆ ಅನುಸಾರವಾಗಿ, ತಿನಸುಗಳನ್ನು ಅವರೇ ತಯಾರಿಸುತಿದಾರೆ. ಅವರು ತಯಾರಿಸಿದ ಆಹಾರ ಸಾಮಗ್ರಿಗಳನ್ನೇ ಭೋಜನಶಾಲೆಗೆ ಕಳುಹಿಸುತಾರೆ."

ಈಗ ಆಳು ಪುಟ್ಟ ಗಾಜಿನ ಕಪ್ಪುಗಳಲ್ಲಿ ಪಾನೀಯಗಳನ್ನು ತಂದು ಎಲ್ಲರ ಮುಂದೆಯೂ ಇರಿಸುತಿದ್ದ. ನಸು ನೀಲಿ ಬಣ್ಣದ ದ್ರವವದು. ಪ್ರತಿಯೊಂದು ಕಪ್ಪಿನಲ್ಲಿಯೂ ಸುಮಾರು ಎರಡು ಔನ್ಸಿನಷ್ಟಿದ್ದಿತು. ಅದು ನಮ್ಮ ಕಾಫಿ ಟೀಗಳಂತೆ ರುಚಿಕರವಾದುದಲ್ಲ. ರುಚಿಯಾಗಲೀ ಪರಿಮಳವಾಗಲೀ ಇಲ್ಲದ ಪಾನೀಯವದು. ಅದನ್ನು ತೆಗೆದು ಬಾಯೊಳಗೆ ಸುರಿದು ಗಂಟಲನ್ನು ಒದ್ದೆ ಮಾಡಿಕೊಂಡೆ. ಆ ಎರಡು ಔನ್ಸಿನ ಪಾನೀಯ ಅರೆ ಚಣದಲ್ಲಿ ನನ್ನ ಬಳಲಿಕೆ ನೀರಡಿಕೆಗಳನ್ನು ಇಲ್ಲವಾಗಿಸಿತು.

ಆಳುಗಳು ತಿನಸುಗಳ ತಟ್ಟೆಗಳನ್ನು ತಂದಿಡುವುದು, ತೆಗೆದೊಯ್ಯುವುದು ಇತ್ಯಾದಿ ಮಾಳ್ಕೆಗಳನ್ನು ಎಸಗುತಿದ್ದರು. ಆದರೆ ಅವರು ಒಂದೇ ಒಂದು ಮಾತಾಡದಿರುವುದನ್ನು ಕಂಡು ನನಗೆ ಅತ್ಯಾಶ್ಚರ್ಯವಾಯಿತು. ಇವರೆಲ್ಲರೂ ಮೂಕರಿರುವರೇನೋ ಎಂದು ನಾನು ಸಂದೇಹಗೊಳ್ಳದಿರಲಿಲ್ಲ. ಆದುದರಿಂದ ಪಕ್ಕದಲ್ಲಿದ್ದ ಮೀನಳನ್ನು ಕಿರುದನಿಯಲ್ಲಿ ನಾನು ಕೇಳಿದೆ. "ಇವರೆಲ್ಲ ಮಾತರಿಯದ ಮೂಕರೇ?"

"ಅಲ್ಲ." ಮೀನಾ ತಲೆಯನ್ನಲುಗಿಸಿದಳು. "ಇವರೆಲ್ಲ ಯಂತ್ರದ ಮನುಷ್ಯರು. ಆವ ಕೆಲಸ ಮಾಡಲು ಇವರನ್ನು ನಿರ್ಮಿಸಿದಾರೋ, ಆ ಗೈಮೆಗಳನ್ನು ಮಾತ್ರ ಎಸಗುತಾರೆ."

ಆ ಯುಗದ ಮಾನವರು ಯಾಂತ್ರಿಕ ವಿಜ್ಞಾನದಲ್ಲಿ ಬಹು ಮುಂದುವರಿದಿದ್ದರು. ಅವರ ಸಂಶೋಧನೆಗಳ ಫಲವಾಗಿ ಯಾಂತ್ರಿಕ ಮನುಷ್ಯ ಜನ್ಮ ತಳೆದಿದ್ದ. ಶ್ರಮವಹವೆನಿಸಿದ ಕೆಲಸಗಳೆಲ್ಲಾ ಈ ಯಾಂತ್ರಿಕ ಮನುಷ್ಯನ ಹೆಗಲಮೇಲೆ ಬಿದ್ದಿದ್ದುವು. ಭಾರದ ಸರಕುಗಳನ್ನು ಎತ್ತುವುದು ಒಯ್ಯುವುದು, ಒಂದೇ ಬಗೆಯ ಸರಕುಗಳನ್ನು ಎಳ್ಳಷ್ಟು ವ್ಯತ್ಯಾಸವಾಗದಂತೆ ಹಂಚುವುದು ಇತ್ಯಾದಿ ಮಾಳ್ಕೆಗಳನ್ನೆಲ್ಲಾ ಯಾಂತ್ರಿಕ ಮನುಷ್ಯ ಜರುಗಿಸುತಿದ್ದ. ಉಡುಗುವುದು, ಸಾರಿಸುವುದು, ಕೊಳೆಗಳನ್ನು ತಡೆಗಟ್ಟುವುದು ಮೊದಲಾದ ನಗರ

ನೈರ್ಮಲ್ಯವನ್ನು ಕಾಪಾಡುವ ಗೈಮೆಗಳನ್ನು ಅಂದಿನ ಮಾನವರು ಯಾಂತ್ರಿಕ ಮನುಷ್ಯನ ವಶ ಒಪ್ಪಿಸಿದ್ದರು. ಅಂತೆಯೇ ಊಟದ ವಸತಿಗಳಲ್ಲಿ ತಿಂಡಿ ತಿನಸುಗಳನ್ನು ಹಂಚುವ ಕಾರ್ಯವನ್ನು ಯಾಂತ್ರಿಕ ಮನುಷ್ಯ ಕೈಗೊಂಡಿದ್ದ. ಯಾಂತ್ರಿಕ ಮನುಷ್ಯನ ಉಗಮದೊಡನೆ ಸಮಾಜ ಸಾರ್ವಜನಿಕ ಭೋಜನ ಶಾಲೆಗಳನ್ನೇ ಉಪಯೋಗಿಸತೊಡಗಿತು. ತಂತಮ್ಮ ಮನೆಗಳಲ್ಲಿ ಅಟ್ಟುಣುವ ಪರಂಪರೆಯನ್ನು ಜನರು ನಿಲ್ಲಿಸಿದರು. ಸಾರ್ವಜನಿಕ ಊಟದ ವಸತಿಗಳು ಮೂಡಲು ಮಾನವನ ಕುಟುಂಬ ಜೀವನವಾದರೂ ಶಿಥಿಲವಾಗತೊಡಗಿತು.

ಯಾಂತ್ರಿಕ ಮನುಷ್ಯನ ಉದಯ ಅಂದಿನ ಜನಜೀವನದಲ್ಲಿ ಒಂದು ಹಿರಿಯ ಕ್ರಾಂತಿಯನ್ನೆಸಗಿರಬೇಕು. ದೇಹಕ್ಕೆ ಆಯಾಸವನ್ನು ನೀಡುವ ಯಾವ ಕೆಲಸವನ್ನೂ ಮನುಷ್ಯ ಮಾಡಬೇಕಾಗಿ ಉಳಿಯಲಿಲ್ಲ. ಮಲಿನವೆನಿಸಿದ ಕೀಳೆನಿಸಿದ ಗೈಮೆಗಳೆಲ್ಲವೂ ಯಾಂತ್ರಿಕ ಮನುಷ್ಯನ ಗುತ್ತಿಗೆಯಾದುವು. ಹೀಗೆ ಯಾಂತ್ರಿಕ ಮಾನವನ ಆವಿರ್ಭಾವ ಸಮಾಜದಲ್ಲಿದ್ದ ಮೇಲು ಕೀಳೆಂಬ ಭಾವನೆಗಳನ್ನೆಲ್ಲಾ ತೊಡೆದು ಹಾಕಿರಬೇಕು. ಸಮತೆಯ ಹೆದ್ದಾರಿಯಲ್ಲಿ ಸಮಾಜ ಮುನ್ನಡೆದಿರಬೇಕು.

“ ಯಾಂತ್ರಿಕ ಮನುಷ್ಯನನ್ನು ಕಂಡು ನನ್ನ ಮನಸ್ಸಿನಲ್ಲಿ ಈ ಭಾವನೆಗಳೆಲ್ಲಾ ಮೂಡಿದುವು. ಆಹಾರದ ಮಾತನ್ನೆತ್ತಿ ಎಲ್ಲಿಗೋ ಬಂದೆ.” ಆಚಾರ್ಯರ ಮಾತು ಮತ್ತೆ ಅವರ ಊಟದ ಮ್ಯೋಜನ್ನು ಬಳಸಿತು.

ಎಲ್ಲರೂ ಒಂದೇ ಬಗೆಯ ಆಹಾರ ಉಪಯೋಗಿಸುವುದನ್ನು ಕಂಡು ನನಗೆ ಸೋಜಿಗವೆನಿಸಿತು. ನನ್ನ ಮುಂದೆ ಮತ್ತು ಪಕ್ಕದಲ್ಲಿ ಸಾಲುಸಾಲಾಗಿ ಕುಳಿತ ಮಂದಿಯೆಲ್ಲ ಅಂಗೈಯಗಲದ ಬಿಸ್ಕೆಟ್ಟುಗಳನ್ನು ಮೆಲ್ಲುತಿದ್ದರು, ಕೆಂಪು ಬಣ್ಣದ ಗೋಲಿಗಳನ್ನು ಜಗಿಯುತಿದ್ದರು, ಎರಡು ಔನ್ಸು ನೀಲಿಯ ಪಾನೀಯವನ್ನು ಕುಡಿಯುತಿದ್ದರು. ಎಷ್ಟೆಂದರೂ ಮನುಷ್ಯ ವೈವಿಧ್ಯತೆಗಳನ್ನು ಬಯಸುವ ಪ್ರಾಣಿ. ನೂರು ಮಂದಿಯ ನಾಲಗೆಗಳಿಗೆ ಒಂದೇ ಬಗೆಯ ಆಹಾರ ರುಚಿಸದು. ಇನಿತು ಮಂದಿ ಒಂದೇ ಬಗೆಯ ಆಹಾರ ಮೆಲ್ಲಬೇಕಾದರೆ ಏನಾದರೂ ಒಂದು ಪ್ರಬಲ ಕಾರಣವಿರಲೇಬೇಕು. ಎಂದು ನನ್ನ ಬುದ್ಧಿ ತರ್ಕಿಸಿತು. ನಾನು ಪಕ್ಕದಲ್ಲಿದ್ದಾಕೆಯನ್ನು ಪ್ರಶ್ನಿಸಿದೆ. “ ಎಲ್ಲರೂ ಒಂದೇ ಬಗೆಯ ಆಹಾರ ತಿನ್ನುವಿರಾ ? ”

" ಹೂಂ. ಎಲ್ಲರೂ ಒಂದೇ ರೀತಿಯ ತಿನಸುಗಳನ್ನೇ ತಿನ್ನಬೇಕು." ಎಂದಳು ಮೀನಾ.

" ಏಕೆ ? "

" ಅದೇ ಇಲ್ಲಿ ನಮ್ಮ ನಿಯಮ." ಆಕೆ ಉಸುರಿದಳು. " ನಿನ್ನ ಊರಲ್ಲಿ ಈ ನಿಯಮವಿಲ್ಲವೇ ? "

" ಇಲ್ಲ. ನಮಗೆ ಇಷ್ಟವಿರುವ ಆಹಾರವನ್ನು ನಾವು ಮೆಲ್ಲಬಹುದು.' ನಾನು ಉತ್ತರಿಸಿದೆ " ನಮ್ಮ ನಾಲಿಗೆಗಳನ್ನು ತಡೆವ ಕಾಯಿದೆಗಳಿಲ್ಲ."

" ಹಾಗಾದರೆ ನೀವು ಪುಣ್ಯಶಾಲಿಗಳು. ನಮಗೆ ರುಚಿದೋರುವ ಆಹಾರ ಮೆಲ್ಲುವ ಹಕ್ಕಿಲ್ಲ. ನಮಗೆ ಬಯಕೆಯಾದರೂ ಅದು ದೊರಕದು. ಇಂತಹ ಆಹಾರವನ್ನೇ ನಾವು ತಿನ್ನಬೇಕೆಂದು ಸರಕಾರ ನಿಶ್ಚಯಿಸಿದೆ. ಸರಕಾರವೆಂದರೆ ವಿಜ್ಞಾನಿಗಳು. ಅವರ ಕಾನೂನು ಮೀರಿ ನಡೆದರೆ ಶಿಕ್ಷೆಯಾಗುವುದು."

ಇಂತಹ ಬಗೆಯ ಆಹಾರವನ್ನೇ ಜನ ಉಪಯೋಗಿಸಬೇಕೆಂದು ಸರಕಾರ ನಿಯಮ ಮಾಡಿದೆಯೆಂದರಿತು ನನಗೆ ಕೌತುಕವೆನಿಸಿತು. ಇಂದಿನ ಯುಗದಲ್ಲಿ ಅಂತಹ ಒಂದು ಕಾಯಿದೆ ಮಾಡಿದರೆ, ಆ ಸರಕಾರ, ತೊಗಲಕನ ಐಲು ಆಡಳಿತಕ್ಕೆ ಎಣೆಯಾಗಬಹುದು. ಎಂತಹ ದಕ್ಷತೆಯುಳ್ಳ ಸರಕಾರಕ್ಕೂ ಈ ಕಾರ್ಯ ಅಸಾಧ್ಯ. ಹಿಮಾಲಯ ಪರ್ವತವನ್ನು ಕಿತ್ತು ಬಂಗಾಳಕೊಲ್ಲಿಗೆ ಎಸೆಯಲು ಹವಣಿಸುವಷ್ಟು ಹಾಸ್ಯಾಸ್ಪದ. ಆದರೆ ನಲವತ್ತು ತಲೆಮಾರು ಮುಂದಿನ ಸಂತತಿ ಈ ಅಗಾಧ ಕಾರ್ಯವನ್ನು ಸಾಧಿಸಿತ್ತು. ನಮ್ಮ ಮರಿ-ಮಕ್ಕಳು ಹಿಮಾಲಯವನ್ನು ಕಿತ್ತು ಕಡಲ ತಳದಲ್ಲೆಸೆವ ಭಗೀರಥ ಪ್ರಯತ್ನವೆಸಗಿ ಯಶಸ್ಸು ಗಳಿಸಿದ್ದರು. ಇದು ಹೇಗೆ ಸಾಧ್ಯವಾಯಿತು ? ವಿಜ್ಞಾನಿಯ ಕೈವಾಡ. ಯಾಂತ್ರಿಕ ಮನುಷ್ಯನ ಮೂಡಲು. ಸಾರ್ವಜನಿಕ ಭೋಜನಾಲಯಗಳು. ಇವೆಲ್ಲಾ ಸೇರಿ ಅಸಾಧ್ಯವಾದುದನ್ನು ಸುಸಾಧ್ಯವೆನಿಸಿದುವು. ಯಾಂತ್ರಿಕ ವಿಜ್ಞಾನ ಹಳ್ಳಿಗಳನ್ನು ಇಲ್ಲವಾಗಿಸಿತು. ೫೦-೧೦೦ ಮೈಲುಗಳ ಅಂತರದಲ್ಲಿ ದೊಡ್ಡ ದೊಡ್ಡ ನಗರಗಳು ಹುಟ್ಟಿದುವು. ಮನುಷ್ಯರು ಇರುವೆಗಳಂತೆ ಗುಂಪು ಕಟ್ಟಿಕೊಂಡು ವಾಸಿಸತೊಡಗಿದರು. ಯಾಂತ್ರಿಕ ವಿಜ್ಞಾನ ಮನುಷ್ಯ ಜೀವನವನ್ನು ಸಹ ತನ್ನ ಅಚ್ಚಿನಲ್ಲಿ ಸಿಕ್ಕಿಸಿ ಗರಗರನೆ ಹೊರಳುವಂತೆ ಮಾಡಿತು.

೪

ನಮ್ಮ ತಟ್ಟೆಗಳಲ್ಲಿದ್ದ ತಿನಸು ಮುಗಿದಿತು. ಮುಂದಿದ್ದ ಮೇಜದಿಂದ ನಾವೆದ್ದೆವು. "ನೀನೆಲ್ಲಿಗೆ ಹೋಗುವೆ?" ಎಂದು ನಾನು ಜತೆಗಾತಿಯನ್ನು ಪ್ರಶ್ನಿಸಿದೆ.

"ಏಕೆ?" ಎಂದು ಅವಳು ಹುಬ್ಬುಗಳನ್ನು ಮೇಲಕ್ಕೆತ್ತಿದಳು.

"ಈ ನಗರಕ್ಕೆ ಅಪರಿಚಿತ ನಾನು. ನಿಮ್ಮ ಜನರ ಜೀವನ, ನಗರ, ವಿಹಾರ ಮಂದಿರ, ಶಿಕ್ಷಣ ಕೇಂದ್ರ ಮೊದಲಾದುವುಗಳನ್ನು ನೋಡಿ ತಿಳಿದು ಕೊಳ್ಳಬೇಕೆಂದಿದೇನೆ. ನೀನು ಒಮ್ಮೆ ಆ ಎಡೆಗಳಿಗೆಲ್ಲ ನನ್ನನ್ನು ಕರೆದೊಯ್ದರೆ ಹಿರಿಯ ಉಪಕಾರವಾಗುವುದು."

ಒಂದು ಕ್ಷಣ ಹೊತ್ತು ಮೀನಾ ಚಿಂತಿಸಿದಳು. ಆಲೋಚನೆಯ ಗೆರೆ ಯೊಂದು ಆಕೆಯ ಹಣೆಯ ಮೇಲೆ ಮೂಡಿತು. ಅನಂತರ ಎಳೆ ನಗೆಯನ್ನು ಬೀರುತ್ತಾ ಅವಳು ನುಡಿದಳು. "ಹೂಂ. ಆಗಲಿ."

ಊಟದ ವಸತಿಯಿಂದ ನಾವು ಹೊರ ಬಂದೆವು. ಹತ್ತಿಪ್ಪತ್ತು ಮಾರು ದೂರ ತೆರಳುವುದರೊಳಗಾಗಿ ಹತ್ತು ಅಂತಸ್ತುಗಳ ಒಂದು ಭವ್ಯ ಮಂದಿರ ನೋಡದೊರಕಿತು. ಮಂದಿರದ ಅಂತಸ್ತುಗಳಲ್ಲೆಲ್ಲಾ ಜನರು ಕಿಕ್ಕಿರಿದಿದ್ದರು. ಒಬ್ಬರ ಬೆನ್ನ ಹಿಂದೆ ಇನ್ನೊಬ್ಬರಂತೆ ಕಟ್ಟಡದೊಳಗೆ ನುಗ್ಗುತಿದ್ದರು. "ಇದು ಯಾವ ಕಟ್ಟಡ?" ಎಂದು ನಾನು ಮೀನಳನ್ನು ಪ್ರಶ್ನಿಸಿದೆ.

"ಇದೊಂದು ಚಿತ್ರ ಮಂದಿರ. ಬಾ, ನೋಡೋಣವೇ?"

ನಲವತ್ತು ತಲೆಮಾರಿನ ಮುಂದಿನ ಚಲಚಿತ್ರ. ಯಾವ ಬಗೆಯದಿರಬಹು ದೆಂದರಿಯಲು ನನಗೆ ಕುತೂಹಲ ಹುಟ್ಟಿತು. ಆದುದರಿಂದ ಆಕೆಯ ನುಡಿಗೆ "ಹೂಂ" ಎಂದು ಒಪ್ಪಿದೆ.

ಇನ್ನೊಂದು ಅರೆಚಣದಲ್ಲಿ ಮಂದಿರದೊಳಗೆ ನುಗ್ಗಲು ತಿಣುಕುತಲಿದ್ದ ನೂರಾರು ಮಂದಿಯೊಡನೆ ನಾವೂ ಬೆರೆತೆವು. ಅದೊಂದು ಚಲಚಿತ್ರ ಮಂದಿರ. ನಮ್ಮ ನಗರಗಳಲ್ಲಿ ಸಾಧಾರಣವಾಗಿ ನೋಡಸಿಗುವ ಚಲಚಿತ್ರ ಮಂದಿರಗಳಂತಲ್ಲ ಅದು. ನಮ್ಮವಕ್ಕಿಂತಲೂ ಅದು ಹತ್ತು ಪಾಲು ದೊಡ್ಡದು. ಒಂದೊಂದು ನೆಲೆಯಲ್ಲಿಯೂ ಸಾವಿರ ಮಂದಿ ಕುಳ್ಳಿರಬಹುದು. ಪ್ರವೇಶಕ್ಕೆ ಹಣಕೊಟ್ಟು ಟಿಕೇಟು ಪಡೆಯಬೇಕಾದುದಿಲ್ಲ. ಮಂದಿರದೊಳಗೆ ಯಾರು ಬೇಕಾದರೂ ಪ್ರವೇಶಿಸಬಹುದು. ಯಾರ ಆತಂಕವೂ ಇಲ್ಲ. ನಾವೂ ಇತರ

ರೊಡನೆ ಮಂದಿರದೊಳಗೆ ನುಗ್ಗಿದೆವು. ಮೆತ್ತಗಿನ ಸುಖಾಸನಗಳ ಮೇಲೆ ಕುಳಿತುಕೊಂಡೆವು.

ನಾವು ಕುಳಿತು ಹತ್ತು ನಿಮಿಷ ಕಳೆವುದರೊಳಗಾಗಿ ಚಿತ್ರ ಪ್ರದರ್ಶನ ಆರಂಭವಾಯಿತು. ಅದು ಮಾನವ ಸಮಾಜ ಚರಿತ್ರೆಯನ್ನು ತಿಳಿಸುವ ಚಲಚಿತ್ರ. ಸಮಾಜದ ಆಡಳಿತ ವಿಜ್ಞಾನಿಗಳ ಕೈ ಸೇರಿದೊಡನೆ, ಮನೋರಂಜನೆ ಯಲ್ಲಿ ಸಹ ಒಂದು ಕ್ರಾಂತಿಯಾಯಿತು. ಕಥೆ, ಕಾದಂಬರಿ, ಪ್ರಣಯಗಳನ್ನು ಚಿತ್ರರೂಪಕ್ಕೆ ಇಳಿಸುವ ಪರಂಪರೆಯನ್ನು ವಿಜ್ಞಾನಿಗಳು ತಡೆದಿದ್ದರು. ವಿಜ್ಞಾನ ಮತ್ತು ಅದಕ್ಕೆ ಸಂಬಂಧಿಸಿದ ಹತ್ತಾರು ಶಾಸ್ತ್ರಗಳ ತಿಳುವಳಿಕೆಯನ್ನು ಜನತೆಗೆ ಉಂಟುಮಾಡುವುದೇ ಚಲಚಿತ್ರದ ಮುಖ್ಯ ಗುರಿಯಾಗಿ ಪರಿಣಮಿಸಿತು. ಕಥೆ ಕಾದಂಬರಿಗಳನ್ನು ಚಿತ್ರವಾಗಿ ರೂಪಾಂತರಗೊಳಿಸಿ ನೋಟಕನ ಮನಸ್ಸನ್ನು ಉಲ್ಲಾಸಗೊಳಿಸುವ ಕ್ರಮವನ್ನು ಬಿಟ್ಟು, ವಿಜ್ಞಾನಿ ಉಳುಮೆ ಯಂತ್ರದ ಚರಿತ್ರೆಯನ್ನು ಚಲಚಿತ್ರವಾಗಿ ರೂಪಾಂತರಗೊಳಿಸುತಿದ್ದ. ಹೆಸರಾಂತ ವಿಜ್ಞಾನಿ ಗಳ ಜೀವನ ಚರಿತ್ರೆಗಳನ್ನು ಚಿತ್ರವಾಗಿ ಪರಿವರ್ತಿಸುತಿದ್ದ. ಚಲಚಿತ್ರ ಮತ್ತು ಇತರ ಕಲೆಗಳು ವಿಜ್ಞಾನಿಯ ಕೈಯಲ್ಲಿ, ಅವನ ಸರ್ವಾಧಿಕಾರವನ್ನು ಕಾಪಾಡ ಲಿಹ ಉಪಕರಣಗಳಾಗಿ ಪರಿಣಮಿಸಿದ್ದುವು. ಚಲಚಿತ್ರ ನಿರ್ಮಾಣ ಮತ್ತು ಪ್ರದರ್ಶನ ಕ್ರಮ ಬಹಳ ಪ್ರಗತಿಯನ್ನು ಹೊಂದಿತ್ತು. ನಮ್ಮ ಚಲಚಿತ್ರಗಳಿಗಿಂತ ಸಾವಿರ ಪಾಲು ಎಂದು ನುಡಿದರೆ ಅತಿಶಯೋಕ್ತಿಯಾಗದು.

" ನಾನಲ್ಲಿ ಕಂಡ ಚಲಚಿತ್ರದಲ್ಲಿ ಸೂಚಿತವಾದ ಚರಿತ್ರೆಯನ್ನು ಹೇಳ ತೊಡಗುವುದಾದರೆ ಅದೊಂದು ಮಹಾ ಗ್ರಂಥವಾಗಬಹುದು. ಅದರ ಸಂಕ್ಷೇಪ ವಿವರಣೆಯನ್ನು ನಿಮಗೆ ಬೇಸರವೆನಿಸದಿದ್ದರೆ ನಾನು ತಿಳಿಸುತ್ತೇನೆ. "

ಆಚಾರ್ಯರು ಮಾತು ನಿಲ್ಲಿಸಿ ನಮ್ಮ ಮೊಗ ನೋಡಿದರು.

" ಆಗಲಿ ನಮಗೆ ಬೇಸರವಿಲ್ಲ. ನೀವು ಚಲಚಿತ್ರದಲ್ಲಿ ಕಂಡ ಮಾನವ ಸಮಾಜದ ಚರಿತ್ರೆಯನ್ನು ತಿಳಿಸಿ. ನೀವು ಹೇಳುತಿರುವ ವೃತ್ತಾಂತ ಕುತೂಹಲ ಕಾರಿಯಾದುದು. " ನಾನೂ ಗೋಪುನೂ ಏಕಕಾಲದಲ್ಲಿ ನುಡಿದೆವು.

" ನಮ್ಮ ಮುಂದಿನ ಪೀಳಿಗೆಯವರ ಎಸಕಗಳೊಡನೆ ನಮ್ಮ ಬಾಳ್ಕೆ ಗಳನ್ನು ಹೋಲಿಸಿ ನೋಡಿದರೆ ಆಡು ಅಳಿಲುಗಳನ್ನು ತೂಗಿ ನೋಡಿದಂತಾಗು ವುದು. ಆ ಚಲಚಿತ್ರದಲ್ಲಿ ನಾನು ಕಂಡ ಚರಿತ್ರೆಯನ್ನು ನಾನು ನಿಮಗೆ ತುಸ್ಸು ವಿವರಿಸಿ ಹೇಳುತ್ತೇನೆ. ಆ ಚಿತ್ರದಲ್ಲಿ ಮಾನವ ಸಮಾಜದ ಇತಿಹಾಸ,-ಇನ್ನೂ

ಅರ್ಧ ಶತಮಾನಗಳ ಮುಂದೆ,- ಕ್ರಿಸ್ತಶಕ ಎರಡು ಸಾವಿರ ವರುಷಗಳಲ್ಲಿ ಆರಂಭವಾಯಿತು. ಇಂದು ಮಾನವ ಸಮಾಜದಲ್ಲಿ ಪರಸ್ಪರ ತಿಕ್ಕಾಡುತಿರುವ ವಿವಿಧ ಶಕ್ತಿಗಳನ್ನು ನಾವು ಸರಿಯಾಗಿ ಅರಿತುಕೊಂಡಿಲ್ಲ. ಅರಿತ್ಯುಕೊಳ್ಳಲು ಹವಣಿಸುತಲೂ ಇಲ್ಲ. ಆದರೆ ಐದು ಶತಮಾನಗಳ ಚರಿತ್ರೆಯನ್ನು ಕಂಡರಿತ ನನಗೆ ಈ ವಿವಿಧ ಶಕ್ತಿಗಳ ಸೆಣಸಾಟ ಅಂಗೈಯೊಳಗಿನ ನೆಲ್ಲಿಕಾಯಿಯಂತೆ ಸಿಚ್ಛಳವಾಗಿ ಕಾಣಿಸುತಲಿದೆ. ಒಂದೆಡೆ ಭಂಡವಾಳಶಾಹಿ, ಇನ್ನೊಂಡೆ ಸಾಮ್ಯವಾದ ಇವುಗಳ ತುಮುಲ ಯುದ್ಧದೊಡನೆ ಕ್ರಿ. ಶ. ಎರಡು ಸಾವಿರ ವರುಷದ ಚರಿತ್ರೆ ಆರಂಭವಾಯಿತು. ಆ ಕಾಲಕ್ಕೆ ಪರಮಾಣು ಶಕ್ತಿಯ ಉಪಯೋಗ ವಿವಿಧ ಮುಖವಾಗಿ ಬೆಳೆದಿರುತದೆ. ಆಕಾಶ ವಿಮಾನ, ಹಡಗು, ಉಗಿಬಂಡಿಗಳು, ವಿವಿಧ ಯಾಂತ್ರಿಕೋದ್ಯಮಗಳು ಪರಮಾಣು ಶಕ್ತಿಯಿಂದಲೇ ಚಲಿಸುತವೆ, ನಡಿಯುತವೆ. ವಿಜ್ಞಾನದ ವಿಕಾಸದೊಡನೆ ಮಾನವನ ರಾಕ್ಷಸಬುದ್ಧಿಯಾದರೂ ಹತ್ತುಪಟ್ಟು ನೂರು ಪಟ್ಟು ಬೆಳೆಯುತದೆ. ವಿಶ್ವಬಾಂಧವ್ಯ, ವಿವಿಧ ಜನಾಂಗಗಳ ಸಹಕಾರ ಇವು ಇಂದಿನಂತೆಯೇ ಬಾಯಿಮಾತಾಗಿ ಉಳಿಯುತವೆ. ಸ್ವಂತ ಲಾಭ ದೃಷ್ಟಿಯಿಂದಲ್ಲದೆ ತ್ಯಾಗಬುದ್ಧಿಯಿಂದ ಯಾವ ಜನಾಂಗವೂ ಸಹಕರಿಸುವುದಿಲ್ಲ. ಪ್ರತಿಯೊಂದು ಜನಾಂಗವೂ ತನ್ನ ಬಲವನ್ನು ಮೊದಲಿಗಿಂತ ಹತ್ತು ಪಾಲು ನೂರು ಪಾಲು ಹೆಚ್ಚಿಸಿಕೊಳ್ಳುತವೆ. ಕ್ರಾಂತಿಕಾರಿ ಚಟುವಟಿಕೆಗಳನ್ನು ಮುರಿಯುವುದು, ಕ್ರಾಂತಿಕಾರಿ ಜನಾಂಗಗಳನ್ನು ಸದೆಬಡಿಯುವುದು ಭಂಡವಾಳಿ ರಾಷ್ಟ್ರಗಳ ಉದ್ಯಮವಾಗುತದೆ. ಇದರ ಪರಿಣಾಮವಾಗಿ ಆಂಗ್ಲೋ ಅಮೇರಿಕನ್ನು ಜನಾಂಗಗಳಿಗೂ ಸೋವಿಯಟ್ಟು ಸಹಕಾರಕ್ಕೂ ವೈಷಮ್ಯಗಳು ಬೆಳೆಯುತ್ತಾ ಹೋಗುತವೆ. ಹಗೆತನ ಹೊಗೆಯಾಡುತ್ತಾ ಯಾವಾಗ ಮಾನವ ಸಮಾಜವನ್ನೇ ತುತ್ತುಗೊಳುವುದೆಂದು ಹವಣಿಸುತಿರುತದೆ.

“ ಭಂಡವಾಳಿಶಾಹಿ ಜನಾಂಗಗಳಲ್ಲಿಯಾದರೂ ನೆಮ್ಮದಿಯಿಲ್ಲ. ಅವರಲ್ಲಿ ಮುಕ್ಕಾಲು ಪಾಲು ದುಡಿವವರು, ದಲಿತರು ನೆಲದವ್ವನ ಅಣಿಗರು. ಅವರ ಆಶೆ ಆಕಾಂಕ್ಷೆಗಳೆಲ್ಲ ಭಂಡವಾಳಿಗರ ದರ್ಪದ ತುಳಿತಕ್ಕೆ ಸಿಲುಕಿ ಕಮರಿ ಹೋಗುತವೆ. ಪರಮಾಣು ಶಕ್ತಿಯನ್ನೂ, ನೂತನ ವಿನಾಶಕ ಯಂತ್ರಗಳನ್ನೂ ತಮ್ಮ ಅಂಕೆಯಲ್ಲಿರಿಸಿಕೊಂಡ ಭಂಡವಾಳಿಗರು, ತಮ್ಮ ದಲಿತರ ಸ್ವಾತಂತ್ರ್ಯವನ್ನು ಕಸಿಮುಕೊಳ್ಳುತಾರೆ. ಕ್ರಾಂತಿಕಾರಕ ವಿಚಾರಗಳನ್ನು ತಡೆಗಟ್ಟುತಾರೆ.

ದಲಿತರು ಬೇರೆ ಉಪಾಯಗಾಣದೆ ಭಂಡವಾಳಶಾಹಿಯನ್ನು ಅಡಿಮೇಲು ಮಾಡಲು ಕ್ರಾಂತಿ, ಕಾರಸ್ಥಾನ, ಕುಟಿಲ ತಂತ್ರಗಳನ್ನು ಕೈಗೊಂಡು ಮಾನವ ಸಮಾಜದಲ್ಲಿಯೇ ಒಂದು ಹಿರಿಯ ಜ್ವಾಲಾಮುಖಿಯನ್ನೆಬ್ಬಿಸುತಾರೆ. ಇನ್ನೊಂದೆಡೆ ಭಂಡವಾಳಿಗರು, ಶ್ರಮಜೀವಿಗಳನ್ನು ಹತ್ತಿಕ್ಕಲು ಅಣಿಯಾಗುತಾರೆ. ಜನಸಂಖ್ಯೆಯನ್ನು ನೋಡಿದರೆ ಶ್ರಮಜೀವಿಗಳೇ ಹೆಚ್ಚು ಮಂದಿ. ಪ್ರತಿಯೊಂದು ಜನಾಂಗದಲ್ಲಿಯೂ ಭಂಡವಾಳಿಗರು ಕೆಲವು ಲಕ್ಷ ಮಾತ್ರ. ದಲಿತರಿಗಿಲ್ಲದ ಯಾಂತ್ರಿಕ ಆಯುಧಗಳು ಅವರಿಗಿವೆ. ವಿಜ್ಞಾನಿಗಳು ಅವರ ಬೆಂಬಲಕ್ಕಿದಾರೆ. ವಿಜ್ಞಾನದ ಬಲದಿಂದ ಅವರು ದುಡಿಮವರನ್ನು ಹತ್ತಿಕ್ಕಲು ಪ್ರಯತ್ನಿಸುತಾರೆ. ಯಾಂತ್ರಿಕ ಆಯುಧಗಳು ದಲಿತರ ನೆತ್ತರಲ್ಲಿ ಮೀಯುತವೆ. ಅಮೇರಿಕದ ಮೆಕ್ಸಿಕೋದಲ್ಲಿ ಕ್ರಾಂತಿಯಾಗಿ ಸಾಮ್ಯವಾದ ಗದ್ದುಗೆಯನ್ನಡರುತಿದೆ. ಆ ಗಾಳಿ ವಿಶಾಲವಾದ ಅಮೇರಿಕೆಯ ಇತರ ಭಾಗಗಳಿಗೂ ಬೀಸುತದೆ. ದಿಗಿಲುಗೊಂಡ ಭಂಡವಾಳಿಗರು ನೂತನ ಭೂಖಂಡಗಳಲ್ಲಿ ಸಾಮ್ಯವಾದವನ್ನು ಇಲ್ಲವಾಗಿಸಲೋಸುಗ ಪರಮಾಣು ಶಕ್ತಿಗೆ ಶರಣು ಹೋಗುತಾರೆ. ಪರಮಾಣು ಶಕ್ತಿ ಕ್ರಾಂತಿಕಾರಿಗಳನ್ನೆಲ್ಲ ಬೂದಿ ಮಾಡುವ ಭಸ್ಮಾಸುರನ ಕೈಯಾಗಿ ಪರಿಣಮಿಸುತವೆ. ಅಮೇರಿಕದ ಭಂಡವಾಳಿಗರು ಮೆಕ್ಸಿಕೋದ ಮೇಲೆ ಪರಮಾಣು ಬಾಂಬುಗಳನ್ನು ಮಳೆಗರೆಯುತಾರೆ. ಮೆಕ್ಸಿಕೋ ಈ ಅಗ್ನಿ ವರ್ಷದಿಂದ ಒಂದು ಮರುಭೂಮಿಯಾಗಿ ರೂಪಾಂತರವನ್ನೈದುತದೆ. ಈ ಸಂದರ್ಭದಲ್ಲಿಯೇ ಬ್ರಿಟನ್ ಅರಬಿ ಜನಾಂಗಗಳಲ್ಲೆದ್ದ ಕ್ರಾಂತಿಯನ್ನಡಗಿಸಲು ಪರಮಾಣು ಬಾಂಬುಗಳನ್ನು ಉಪಯೋಗಿಸುತದೆ. ರಷ್ಯ ತನ್ನ ಉದ್ದನ್ನ ಕೈ ಚಾಚಿ ಜರ್ಮನಿ ಮತ್ತು ಪೂರ್ವ ಯುರೋಪು ಜನಾಂಗಗಳಿಗೆ ಸಾಮ್ಯವಾದದ ದೀಕ್ಷೆಗೊಡುತದೆ. ಯುರೋಪಿನಲ್ಲಿ ಭಂಡವಾಳಿವಾದ ಉಸಿರಾಡಲು ಅವಕಾಶ ದೊರಕದೆ, ಕೊನೆಗೆ ಮರಣ ಹೊಂದುತದೆ. ಯುರೋಪು ಸಾಮ್ಯವಾದದ ಹಿಡಿತದಲ್ಲಿ ಸಿಲುಕಿರುದನ್ನು ಕಂಡು, ಇತರ ಭಂಡವಾಳಿ ಜನಾಂಗಗಳೆಲ್ಲ ದಿಗಿಲುಗೊಂಡು ತಮ್ಮ ಬಲವನ್ನು ಇನ್ನಷ್ಟು ಹೆಚ್ಚಿಸಿಕೊಳ್ಳುತವೆ. ಪ್ರಪಂಚದಿಂದ ಸಾಮ್ಯವಾದದ ಹೆಸರನ್ನು ತೊಡೆದು ಹಾಕಲು ಒಂದು ಐಕ್ಯಮುಖವನ್ನು ರಚಿಸಿಕೊಳ್ಳುತವೆ.

ಆಂಗ್ಲೋ ಅಮೇರಿಕನ್ ಮತ್ತು ಇತರ ಭಂಡವಾಳಿ ಜನಾಂಗಗಳು ತಮ್ಮೊಳಗಿರುವ ಕ್ರಾಂತಿಕಾರಿ ದಲಿತರನ್ನು ನಿರ್ನಾಮಗೊಳಿಸಲು ಭಗೀರಥ

ಪ್ರಯತ್ನವೆಸಗುತವೆ. ರೇಡಿಯೋ ಟೆಲಿವಿಷನ್ನುಗಳು ದುಡಿವವರ ಕಾರಸ್ಥಾನಗಳನ್ನು ಮುರಿಯಲಿಹ ಉಪಕರಣಗಳಾಗಿ ಪರಿಣಮಿಸುತವೆ. ಈ ಸಂದರ್ಭದಲ್ಲಿಯೇ ಮನುಷ್ಯನ ಅಂತರಂಗದಲ್ಲಿ ಮೂಡಬಹುದಾದ ಎಲ್ಲ ಬಗೆಯ ಭಾವನೆಗಳನ್ನು, ಆಲೋಚನೆಗಳನ್ನು ಗ್ರಹಿಸಬಲ್ಲ ಹೊಸ ಬಗೆಯ ಯಂತ್ರವೊಂದನ್ನು ವಿಜ್ಞಾನಿಗಳು ನಿರ್ಮಿಸುತಾರೆ. ಈ ಹೊಸ ನಿರ್ಮಾಣದ ಬಲದಿಂದ ಭಂಡವಾಳಿಗರ ಸರಕಾರಗಳು ಜನರ ವಿಚಾರಗಳನ್ನರಿಯತೊಡಗುತವೆ. ಈ ನೂತನ ಯಂತ್ರ ಜನರ ವಿಚಾರ ಪ್ರಗತಿಗೆ ಬಲವಾದ ಒಂದು ತಡೆಯನ್ನು ತಂದೊಡ್ಡುತದೆ. ಆಳುವವರು ತಮಗೆ ಬೇಡವೆನಿಸಿದ ವಿಚಾರಗಳು, ಅವೆಷ್ಟು ಪ್ರಗತಿಪರವೆನಿಸಿದರೂ, ಅವನ್ನು ಇಲ್ಲವಾಗಿಸಲು ಪಣತೊಡುತಾರೆ. ಆಳುವವರಿಗೆ ಬೇಡವೆನಿಸಿದ ದಾರಿಗಳಲ್ಲಿ ಆಲೋಚಿಸುವವರೆಲ್ಲ ಸೆರೆಮನೆಗಳನ್ನು ಸೇರುತಾರೆ. ಇಲ್ಲದಿದ್ದರೆ ಮಾರ್ಫಿನ್ ಸೂಜಿಮದ್ದುಗಳಿಗೆ ತುತ್ತಾಗುತಾರೆ. ವಿಚಾರಗ್ರಾಹಕ ಯಂತ್ರ ಮಾನವನ ವಿಚಾರ ಪ್ರಗತಿಗೆ ದೊಡ್ಡ ವಿಘಾತಕವಾಗಿ ಪರಿಣಮಿಸುತದೆ. ಈ ಸಂಶೋಧನೆಯನ್ನು ಆಳುವವರು ದುರುಪಯೋಗಪಡಿಸಿದುದರಿಂದ, ಸಮಾಜಶಾಸ್ತ್ರ, ಮನಃಶಾಸ್ತ್ರ ಲೈಂಗಿಕ ವಿಜ್ಞಾನ ಇವುಗಳಲ್ಲುಂಟಾಗಬಹುದಾದ ಪ್ರಗತಿ ನಿಲ್ಲುತದೆ. ಹೊಸ ವಿಚಾರಗಳನ್ನು ಆಲೋಚಿಸಕೂಡದ ಜನಜಂಗುಳಿ ಹಳೆಯ ಚಚ್ಚಿನಲ್ಲಿಯೇ ಕೆಲಕಾಲ ತಿರುಗುತಿರುತದೆ. ಕಾರಸ್ಥಾನ, ಬಂಡಾಯ ಮೊದಲಾದ ದಾರಿಗಳಲ್ಲದೆ, ಭಂಡವಾಳಿಶಾಹಿಯನ್ನು ಅಡಿ ಮೇಲು ಮಾಡಲು ಹೊಸ ಹಂಚಿಕೆಗಳು ಜನತೆಗೆ ತೋರುವುದಿಲ್ಲ. ಒಂದೊಂದು ಬಂಡಾಯವೂ ಒಂದೊಂದು ನೆತ್ತರ ಕಾಲುವೆ, ಭೂಮಿ ತಾಯಿಗೆ ಒಂದೊಂದು ರಕ್ತಸ್ನಾನ. ಈ ಸಶಸ್ತ್ರ ಬಂಡಾಯಗಳಲ್ಲಿ ದಲಿತರು ತೋರಿಸಿದ ಕ್ರೌರ್ಯವನ್ನು ವಿವರಿಸಲು ನನಗೆ ಅಳವಲ್ಲ. ಆಳುವವರಾದರೂ ಬಂಡಾಯಗಳನ್ನು ಹತ್ತಿಕ್ಕುವುದರಲ್ಲಿ ಕರುಣೆ ತೋರಿಸುವವರಲ್ಲ. ಊರಿಗೆ ಊರುಗಳನ್ನೇ, ಪ್ರಾಂತಗಳಿಗೆ ಪ್ರಾಂತಗಳನ್ನೇ ಪರಮಾಣು ಬಾಂಬುಗಳಿಂದ, ವಿಷವಾತಕಗಳಿಂದ ನಾಶಪಡಿಸುತಾರೆ. ದುಡಿಯುವವರಲ್ಲಿ ಜಾತಿಮತ ವ್ಯತ್ಯಾಸಗಳು ಅಳಿದು ಹೋಗುತವೆ. ಭಾಷಾವ್ಯತ್ಯಾಸ ಶಿಥಿಲವಾಗುತದೆ. ಕ್ರಿಸ್ತಶಕ ೨೦೨೦ರಲ್ಲಿ ಚೀನಾ ಜಪಾನುಗಳಲ್ಲಿ ಮಹಾ ಕ್ರಾಂತಿಗಳು ಉಂಟಾಗುತವೆ. ಪೂರ್ವ ದಿಕ್ಕಿನಲ್ಲಿ ಉದಿಸಿದ ಈ ಜ್ವಾಲಾಮುಖಿ ಇತರ ಭಂಡವಾಳಿಶಾಹಿಗಳಿಗೆ ದಿಗಿಲು ಹುಟ್ಟಿಸುತದೆ. ಚೀನ ಜಪಾನುಗಳು ಸಾಮ್ಯವಾದವನ್ನವಲಂಬಿಸಿ ಸೋವಿಯಟ್ಟು ಮಾದರಿಯ

ಸರಕಾರಗಳನ್ನು ಸ್ಥಾಪಿಸುತವೆ. ಒಂದೆರಡು ವರುಷಗಳಲ್ಲಿ ಚೀನಾ ಜಪಾನುಗಳು ಸೋವಿಯಟ್ ರಷ್ಯದೊಡನೆ ಬೆರೆತುಹೋಗುತವೆ. ಸಾಮ್ಯವಾದದ ಕೇಂದ್ರ ಮಾಸ್ಕೋದಿಂದ ಮಧ್ಯ ಆಸ್ಯಕ್ಕೆ ಬರುತ್ತದೆ. ಸ್ಥಳಾಂತರವನ್ನೈದಿದ ಹೊಸ ಸೋವಿಯಟ್ಟು ತನ್ನ ಸಾವಿರ ತೋಳುಗಳನ್ನು ಚಾಚಿ, ಇಡೀ ಪ್ರಪಂಚವನ್ನೇ ಕವಳಿಸಲು ಹವಣಿಸುತದೆ.

ಆಸ್ಯದಲ್ಲುಂಟಾದ ಮಹಾಪರಿವರ್ತನೆ ಭಂಡವಾಳಿಶಾಹಿ ಜನಾಂಗಗಳ ಕಣ್ಣು ತೆರೆಯಿಸುತದೆ. ಪರಸ್ಪರವಿರುವ ಹಗೆತನ ಮತ್ಸರಗಳನ್ನು ಮರೆತು, ಸಾಮ್ಯವಾದವನ್ನೆದುರಿಸಲು ಪ್ರಪಂಚದ ಭಂಡವಾಳಿ ರಾಷ್ಟ್ರಗಳೆಲ್ಲ ಒಂದೇ ಕೊಡೆಯ ನೆರಳನ್ನು ಸೇರಬೇಕೆಂದು ಅವರು ಪ್ರಚಾರ ನಡೆಸುತಾರೆ. ಸಾಮ್ಯವಾದದಂತೆ, ಭಂಡವಾಳಿಶಾಹಿಯಾದರೂ ಒಂದು ಅಂತರರಾಷ್ಟ್ರೀಯ ಸರಕಾರವನ್ನು ರಚಿಸಬಲ್ಲುದು ಎಂಬ ನೂತನ ತತ್ವವೊಂದು ಬ್ರಿಟಿಷ್ ದ್ವೀಪ ಅಮೇರಿಕಗಳಲ್ಲಿ ಮೂಡುತದೆ. ಆಸ್ಯದಲ್ಲಿಯೂ ಪೂರ್ವ ಯುರೋಪಿನಲ್ಲಿಯೂ ಹೆಬ್ಬಾವಿನಂತೆ ಬಿದ್ದುಕೊಂಡಿರುವ ಸೋವಿಯಟ್ ಪದ್ಧತಿಯ ಸರಕಾರವನ್ನು ಇಲ್ಲವಾಗಿಸಲು ಅಮೇರಿಕ ಪುರೋಹಿತನಾಗಿ ನಿಂತು ಇತರ ಭಂಡವಾಳಿ ಜನಾಂಗಗಳಿಗೆ ಅಂತರರಾಷ್ಟ್ರೀಯ ಸರಕಾರದ ದೀಕ್ಷೆ ಕೊಡುತದೆ. ಆಫ್ರಿಕದ ದಕ್ಷಿಣ ಭಾಗ, ಬ್ರಿಟಿಷ ದ್ವೀಪಗಳು, ಸ್ಪೇನು, ಎರಡು ಅಮೇರಿಕಗಳು ಇವೆಲ್ಲ ಹೊಸ ಭಂಡವಾಳಿಶಾಹಿ ಅಂತರರಾಷ್ಟ್ರೀಯ ಸರಕಾರದ ನೆರಳನ್ನು ಹೊಂದುತವೆ.

ಬಿಳಿ ಜನಾಂಗಗಳು ಸಂಘಟಿಸಿದ ಈ ಅಂತರ್ರಾಷ್ಟ್ರೀಯ ಸರಕಾರ ಈಜಿಪ್ಟಿನಿಂದ ಹಿಡಿದು ಫಿಲಿಪ್ಪೈನು ದ್ವೀಪಗಳತನಕ ಇರುವ ಬಣ್ಣದ ಜನರ ಹೃದಯಗಳಲ್ಲಿ ಪುನಃ ವರ್ಣವಿದ್ವೇಷವನ್ನು ಕೆರಳಿಸುತದೆ. ಅಮೇರಿಕ ಮತ್ತು ಇಂಗ್ಲೆಂಡುಗಳು ಆಫ್ರಿಕ ಮತ್ತು ಆಸ್ಯದಲ್ಲಿದ್ದ ವಿವಿಧ ಜನಾಂಗಗಳನ್ನು ತುಳಿಯಲು ಹೂಡಿದ ಹೊಸ ಚದುರಂಗದಾಟ ಇದೆಂದು ಭಾವಿಸಿ ಅವರು ಅಮೇರಿಕದ ಈ ನೂತನ ಪೌರೋಹಿತ್ಯವನ್ನು ಒಪ್ಪುವುದಿಲ್ಲ.

“ ಬಣ್ಣದ ಜನಾಂಗಗಳೆಲ್ಲ ಒಂದುಗೂಡುವುದು ಅಗತ್ಯ, ಇಲ್ಲದಿದ್ದರೆ ಅವರು ಉಳಿಯುವಂತಿಲ್ಲ ” ಎಂಬ ಹೊಸ ಕೂಗೊಂದನ್ನು ಸ್ವತಂತ್ರ ಹಿಂದೂಸ್ಥಾನ ಎಬ್ಬಿಸುತದೆ. ಈಜಿಪ್ಟಿನವರೂ, ಅರಬರೂ ಈ ಹೊಸ ಆಹ್ವಾನವನ್ನು ಅತ್ಯಾದರದಿಂದ ಬರಮಾಡಿಕೊಳ್ಳುತಾರೆ. ಈಜಿಪ್ಟಿನಿಂದ ಹಿಡಿದು ಬರ್ಮದವರೆಗಿನ ಬಣ್ಣದ ಜನರೆಲ್ಲರೂ ಒಂದುಗೂಡುತಾರೆ. ಹೀಗೆ ಆಸ್ಯದಲ್ಲಿ ಇನ್ನೊಂದು

ಭಂಡವಾಳಶಾಹಿ ಅಂತರ್ರಾಷ್ಟ್ರೀಯ ಸರಕಾರ ಉದಿಸುತ್ತದೆ. ಈ ಹೊಸ ಸರಕಾರದ ಕೇಂದ್ರ ಸಿಂಧು ಪ್ರಾಂತದಲ್ಲಿರುವ ಕರಾಚಿಯಾಗುತ್ತದೆ. ಬರ್ಮದಿಂದ ಹಿಡಿದು ಫಿಲಿಪ್ಪಾಯಿನ್ ದ್ವೀಪಸ್ತೋಮದ ವರೆಗೆ ವ್ಯಾಪಿಸಿದ ಹಳದಿ ಜನರು ತಮ್ಮ ನೆರೆಯವರಾದ ಚೀನಿ ಮತ್ತು ಜಪಾನು ಸೋವಿಯಟ್ಟುಗಳನ್ನು ಮರೆ ಹೋಗುವುದೋ, ಅಲ್ಲ ಬಣ್ಣದ ಜನಾಂಗಗಳ ಮುಂದಾಳುವಾದ ಹಿಂದೂಸ್ಥಾನದ ಮಡಿಲನ್ನು ಆಶ್ರಯಿಸುವುದೋ ಎಂದು ಓಲಾಡುತ್ತಾರೆ. ಈ ದಸಂದರ್ಭದಲ್ಲಿ ಆಗ್ನೇಯ ಏಷ್ಯಾದಲ್ಲಿ ಕ್ರಾಂತಿಯ ಜ್ವಾಲಾಮುಖಿ ಕೆರಳುತ್ತದೆ. ಅಲ್ಲಿನ ಕ್ರಾಂತಿಯನ್ನು ಹತ್ತಿಕ್ಕಲು ಬಿಳಿ ಜನರ ಮತ್ತು ಬಣ್ಣದ ಜನರ ಕೂಟಗಳೆರಡು ಸಖ್ಯ ಬೆಳಸುತ್ತವೆ. ಹಿಂದೀಯರ ಹಲವು ವಿಮಾನಗಳು ಸಯಾಂ, ಬರ್ಮಗಳ ಮೇಲೆ ಪರಮಾಣು ಬಾಂಬುಗಳನ್ನು ಮಳೆಗರೆಯುತ್ತವೆ. ಅಮೇರಿಕದವರು ಈ ಹೊಸ ಯುದ್ಧಕ್ಕೆ ಆಸ್ಟ್ರೇಲಿಯಾವನ್ನು ತಮ್ಮ ನಿಲ್ದಾಣವಾಗಿ ಉಪಯೋಗಿಸಿಕೊಳ್ಳುತ್ತಾರೆ. ಎರಡು ಪ್ರಬಲ ಶಕ್ತಿಗಳ ಮಧ್ಯದಲ್ಲಿ ಸಿಲುಕಿದ ಈ ಬಡಪಾಯಿಗಳು ತತ್ತರಿಸಿ ಹೋಗುತ್ತಾರೆ. ಪೂರ್ವದಿಂದ ಅಮೇರಿಕನರು ಭಯಂಕರ ವಿಷವಾತಕಗಳನ್ನು ಉಪಯೋಗಿಸುತ್ತಾರೆ. ಪಶ್ಚಿಮದಿಂದ ಪರಮಾಣು ಬಾಂಬುಗಳು ನಗರಗಳನ್ನು ನಾಶಮಾಡುತ್ತಿರುತ್ತವೆ. ಜನರು ಮಿಡಿತೆಗಳಂತೆ ಮರಣವನ್ನೈದುತ್ತಾರೆ. ತಮ್ಮ ನೆರೆಯಲ್ಲಿಯೇ ಭಂಡವಾಳಶಾಹಿ ಸರಕಾರಗಳೆರಡು ಹಳದಿ ಜನರ ಮೇಲೆ ದಬ್ಬಾಳಿಕೆ ನಡೆಸುತ್ತಿರುವುದನ್ನು ನೋಡಿ ಸುಮ್ಮನಿರಲು ಚೀನದ ಸೋವಿಯಟ್ಟರಿಗೆ ಸಾಧ್ಯವಾಗುವುದಿಲ್ಲ. ಅವರು ಭಂಡವಾಳಸತ್ತೆಗಳ ಮೇಲೆ ಕೈಯೆತ್ತಲು ಮುಂಬರುತ್ತಾರೆ. ಸರಿ, ಆಗ್ನೇಯ ಆಸ್ಯದಲ್ಲಿ ಭಯಂಕರವಾದ ಒಂದು ವಿಶ್ವ ಸಂಗ್ರಾಮವೇ ಜರಗುತ್ತದೆ. ಯುದ್ಧವೆಂದರೆ, ಇಂದು ನಾವು ನೋಡಿದ ವಿಶ್ವ ಸಂಗ್ರಾಮದಂತಹುದಲ್ಲ. ನಮ್ಮ ಯುದ್ಧಗಳು, ಆ ವಿಶ್ವ ಸಂಗ್ರಾಮದ ಮುಂದೆ ಮಕ್ಕಳಾಟಗಳು. ಈ ಯುದ್ಧಕ್ಕೆ ಯುದ್ಧಮುಖವೂ ಇಲ್ಲ; ಯುದ್ಧರಂಗವೂ ಇಲ್ಲ. ಇಡೀ ದೇಶವೇ ಯುದ್ಧರಂಗ. ಜನಾಂಗದ ಪ್ರತಿಯೊಬ್ಬ ಹೆಣ್ಣು ಗಂಡು ಮುದುಕ ಹಸುಗೂಸು ಇವರೆಲ್ಲರೂ ಕಾದಾಡುವ ಯೋಧರು. ಜೀವಮಾನವನ್ನೆಲ್ಲಾ ಪ್ರಯೋಗ ಶಾಲೆಗಳಲ್ಲಿ ಕುಳಿತು ಸಂಶೋಧನೆಯಲ್ಲಿಯೇ ಕಾಲಕಳೆದ ವಿಜ್ಞಾನಿಗಳೇ ಸೇನಾನಾಯಕರು. ರೇಡಿಯಂ ಯುರೇನಿಯಂ ಮೊದಲಾದ ವಿವಿಧ ಲೋಹಗಳೇ ಅವರು ಬಳಸುವ ಸಾಧನಗಳು. ಪ್ರತಿಸ್ಪರ್ಧಿ ಜನಾಂಗಗಳನ್ನು ಇಲ್ಲವಾಗಿಸುವುದೇ ಅವರ ಗುರಿ.

ಮೃತ್ಯುಕಿರಣಗಳನ್ನು ಅವರು ಬಳಸತೊಡಗಿದ್ದರು. ಈ ಕಿರಣಗಳು ಸಾವಿರಾರು ಮೈಲುಗಳ ದೂರದಿಂದಲೇ ಜನಸಂಪನ್ನವಾದ ನಾಡನ್ನು ಮರುಭೂಮಿಯಾಗಿ ಮಾಡಬಲ್ಲುವು. ವೈಮಾನಿಕರಿಲ್ಲದ ವಿಮಾನಗಳು ಶತ್ರುರಾಜ್ಯಗಳಿಗೆ ತೆರಳಿ ವಿಷವಾತಕಗಳನ್ನು ಸುರಿಸುವುವು, ಪರಮಾಣು ಬಾಂಬುಗಳನ್ನು ಮಳೆಗರೆವುವು. ಅಮೇರಿಕನರು ವಿಷವಾತಕಗಳನ್ನು ಚೀನದ ವಿಶಾಲ ಬಯಲುಗಳ ಮೇಲೆ ಪ್ರಯೋಗಿಸಿದರು. ಮಿಡಿತೆಗಳಂತೆ ಲಕ್ಷಾಂತರ ಮಂದಿ ಮರಣವನ್ನೈದಿದರು. ರೊಚ್ಚಿಗೆದ್ದ ಸೋವಿಯಟ್ಟರು ಪ್ರತಿಕ್ರಿಯೆಯಾಗಿ ಆಸ್ಟ್ರೇಲಿಯದ ಮೇಲೆ ಪರಮಾಣು ಬಾಂಬುಗಳನ್ನು ಸುರಿಸಿದರು ಮೃತ್ಯುಕಿರಣಗಳನ್ನು ಉಪಯೋಗಿಸಿದರು. ಅಡಿಲೇಡ್, ಕೆನ್ಬೆರ, ಸಿಡ್ನಿ ಮೊದಲಾದ ನಗರಗಳು ಉರಿದು ಬೆಂದು ಬೂದಿಯಾಗಿ ಹೋದುವು. ಜನಸಂಖ್ಯೆಯಲ್ಲಿ ಅರ್ಧಕ್ಕಿಂತ ಹೆಚ್ಚು ಪಾಲು ಮೃತ್ಯುವಿನ ಮಡಿಲನ್ನು ಆಶ್ರಯಿಸಿತು. ನಮ್ಮ ಹಿಂದೂಸ್ಥಾನಕ್ಕೂ ಈ ಕಿಚ್ಚು ಬಾಧಿಸದಿರಲಿಲ್ಲ. ಬರ್ಮದಲ್ಲಿ ಸಾಮ್ಯವಾದಿಗಳನ್ನು ನಿರ್ಮೂಲಗೊಳಿಸಲೆಂದು ಸ್ವತಂತ್ರ ಹಿಂದೂಸ್ಥಾನ ಮಾಂಡಲೆ ರಂಗೂನಗಳ ಮೇಲೆ ರೆಕ್ಕೆ ಬಾಂಬುಗಳನ್ನು ಮಳೆಗರೆದಿತು. ಇರಾವದಿ ನದಿ ಬಯಲಲ್ಲಿನ ಜನತೆಯೆಲ್ಲ ರೋಗಾಣು ಬಾಂಬುಗಳಿಗೆ ತುತ್ತಾಯಿತು. ಪ್ರತಿಕ್ರಿಯೆಯಾಗಿ ಮಂಗೋಲಿಯದ ಸೋವಿಯಟ್ಟರು ಗಂಗಾ ನದಿಯ ಬಯಲಿನಲ್ಲಿರುವ ನಗರಗಳನ್ನೆಲ್ಲಾ ವಿಷವಾತಕಗಳಿಂದ ನಾಶಪಡಿಸಿದರು. ಈ ಕಾಳಗಗಳು ಕೊನೆಯಿಲ್ಲದೆ ಸಾಗಿದುವು. ಮನುಷ್ಯನ ಬುದ್ಧಿ ಮತ್ತು ಭಾವನೆಗಳು ತನ್ನ ಒಡನಾಡಿ ಮಾನವನನ್ನು ಇಲ್ಲವಾಗಿಸುವುದರಲ್ಲಿ ವ್ಯಯವಾದುವು.

ಆ ಭಯಂಕರ ಸಂಗ್ರಾಮಗಳ ವರ್ಣನೆಯನ್ನು ವಿವರಿಸುವುದು ನನ್ನ ಅಳವಲ್ಲ. ಚಲಚಿತ್ರದಲ್ಲಿ ಕಂಡ ಬೆಂದ ನಗರಗಳು, ಬೂದಿಯಾದ ಊರುಗಳು, ಮರುಭೂಮಿಯಾದ ನಾಡುಗಳು ನನ್ನ ಎದೆಯನ್ನು ನಡುಗಿಸಿದುವು. ನಾನು ನೋಡುತಿರುವುದು ಚಲಚಿತ್ರವೆಂಬುದನ್ನು ಕ್ಷಣಕಾಲ ಮರತೆ. ನೂರಾರು ಪೀಳಿಗೆಗಳಲ್ಲಿ ಮಾನವನು ಪಡೆದ ಅರಿವು ಅವನ ಹೃದಯವನ್ನು ಅರಳಿಸಿ, ಹಿಂದೆ ಹುಲಿ ಕರಡಿಗಳ ಒಡನಾಡಿಗಳಾಗಿದ್ದ ಅಂದಿನ ಜೀವನ ಮಟ್ಟದಿಂದ ಅವನನ್ನು ಮೇಲಕ್ಕೆತ್ತಿರಲಿಲ್ಲ. ಹಿಂದಿನ ಕಾಲದ ಉಗುರು, ಹಲ್ಲು, ಬೆಣಚಿನಕಲ್ಲು ಈಟಿಗಳ ಬದಲು, ಮನುಷ್ಯ ಈಗ ಭಯಂಕರವಾದ ಮಾರಣಯಂತ್ರಗಳನ್ನು ಉಪಯೋಗಿಸುತಿದ್ದ. ನೆಲದುದ್ದಗಲಕ್ಕೂ ತನ್ನ ತೋಳನ್ನು ಚಾಚಿ ತನ್ನ

ಒಡನಾಡಿಯಾದ ಮಾನವನನ್ನು ಇಲ್ಲವಾಗಿಸುತಿದ್ದ. ತಲತಲಾಂತರದಿಂದ ಧರ್ಮಬೋಧಕರು. ಉಸುರುತಿದ್ದ ದಯೆ, ಸ್ನೇಹ, ಸಹೋದರತೆ ಇವೆಲ್ಲ ಪುಸ್ತಕಗಳಲ್ಲಿಯೆ ಉಳಿದುವು. ವಿಶ್ವದ ಒಡೆತನ ಪಡೆವುದು ಮಾತ್ರ ಮಾನವನ ಗುರಿಯಾಯಿತು. ಆ ಭಂಡವಾಳಿಶಾಹಿ ಮತ್ತು ಸೋವಿಯಟ್ಟು ಕ್ರಮದ ಸಾಮ್ಯವಾದ ಇವೆರಡು ಪ್ರಪಂಚದ ಒಡೆತನಕ್ಕಾಗಿ ಭೀಷಣ ಸಂಗ್ರಾಮವನ್ನೆಸಗಿದುವು. ಈ ಗುರಿಯನ್ನು ಸಾಧಿಸಲೋಸುಗ ಎರಡು ಬಣದವರು ಮನುಷ್ಯ ಜೀವಗಳನ್ನು ಉರಿಸಲಿಹ ಕಟ್ಟಿಗೆ ತುಂಡುಗಳಾಗಿ ಉಪಯೋಗಿಸಿದರು. ಈ ಭೀಕರ ಕದನಗಳಿಂದ ಜನಸಂಖ್ಯೆಯಲ್ಲಿ ಹತ್ತರಲ್ಲಿ ನಾಲ್ಕು ಪಾಲು ಮಡಿದರು. ಭಂಡವಾಳಿಶಾಹಿಗಳು ಧನಬಲ ವಿಜ್ಞಾನದ ಬಲ ಇವುಗಳಿಂದ ವಿಶ್ವದ ಒಡೆತನವನ್ನು ಮರಳಿ ಪಡೆಯಬಹುದೆಂದು ಭಾವಿಸಿದ್ದರು. ಅವರ ಶಕ್ತಿ ಕುಂದಿರಲಿಲ್ಲ. ಇನ್ನೂ ಹಲವು ಶತಮಾನಗಳ ತನಕ ವಿಶ್ವದ ಒಡೆತನ ಅವರಿಗೆ ಮೀಸಲಾಗುವಂತೆ ತೋರುತಿದ್ದಿತು. ಪೂರ್ವ ಮತ್ತು ಪಶ್ಚಿಮಗಳ ಭಂಡವಾಳಿಶಾಹಿಗಳೆರಡೂ ಒಂದುಗೂಡಿದುದರಿಂದ, ಪ್ರಪಂಚದಿಂದ ಸಾಮ್ಯವಾದದ ಹೆಸರೇ ಅಳಿಸಿ ಹೋಗುತಿದ್ದಿತು. ಆದರೆ....

"ಆದರೇನು. ಭಂಡವಾಳಶಾಹಿ ಗೆಲುವು ಪಡೆಯಲಿಲ್ಲವೇ?" ನಡುವೆ ಬಾಯಿ ಹಾಕಿ ಆಚಾರ್ಯರ ಮಾತುಗಳ ಹೊನಲನ್ನು ನಾನು ತಡೆದೆ.

"ಆದರೆ ವಿಧಿಯ ಸಂಕಲ್ಪ ಬೇರೊಂದು ತೆರನಾಗಿತ್ತು. ಇನ್ನೂ ಅನೇಕ ಶತಮಾನಗಳ ತನಕ ಭಂಡವಾಳಿಗರೇ ಪ್ರಪಂಚವನ್ನಾಳುವುದು ಕಾಣದ ಕೈಗೆ ಹಿತವೆನಿಸಲಿಲ್ಲ. ಅದು ತನ್ನ ಬೆರಳುಗಳನ್ನೊಮ್ಮೆ ಅಲುಗಿಸಿತು. ಅಘಟಿತ ಘಟನೆಗಳು ನಡೆದು ಸಾಮ್ಯವಾದಿಗಳು ವಿಶ್ವದ ಒಡೆಯರಾದರು. ಭಂಡವಾಳಿಶಾಹಿಗೆ ಅದು ನಿರೀಕ್ಷಿಸದ ಎಡೆಯಿಂದ ಆಪತ್ತು ಬಂತು. ಈತನಕ ವಿಜ್ಞಾನಿಗಳು ಭಂಡವಾಳಿಗರಿಗೆ ಬೆಂಬಲರಾಗಿದ್ದರು. ಅವರ ಬೆಂಬಲದಿಂದಲೇ ವಿಶ್ವದ ಒಡೆತನವನ್ನು ಭಂಡವಾಳಿಗರು ಗಳಿಸಿದ್ದರು. ಆದರೆ ಎಡೆಬಿಡದೆ ನಡೆಯುತಿರುವ ಯುದ್ಧಗಳು, ನರಹತ್ಯೆಗಳು ವಿಜ್ಞಾನಿಗಳನ್ನು ರೊಚ್ಚಿಗೇಳಿಸಿದುವು. ವಿಜ್ಞಾನ ಯಾವಾಗಲೂ ಪ್ರಗತಿಮುಖವಾದುದು. ಭಂಡವಾಳಿಶಾಹಿ ಪ್ರತಿಗಾಮಿಯಾದುದು. ಈ ಪ್ರತಿಗಾಮಿ ಶಕ್ತಿಯ ಅಂಕೆಗೊಳಗಾದುದರಿಂದ ತಮ್ಮ ಸಂಶೋಧನೆ ನಿರ್ಮಾಣಗಳು ಪ್ರಪಂಚದ ಮಾನವ ಸಂಸ್ಕೃತಿಯನ್ನೇ ಹಾಳುಗೈಯತಲಿವೆ ಎಂಬ ವಿವೇಕ ವಿಜ್ಞಾನಿಗಳಲ್ಲಿ ಮೂಡಿತು. ತಮ್ಮ ಬುದ್ಧಿಬಲ ಸಂಶೋಧನೆ

ಗಳಿಂದ ಲಾಭ ಪಡೆಯತಕ್ಕವರು ಭಂಡವಾಳಿಗರು. ದಲಿತರಂತೆ ತಾವಾದರೂ ಸಾಮ್ರಾಜ್ಯವಾದದ ಗಾಣಕ್ಕೆ ಸಿಲುಕಿ ನೆತ್ತರು ಬಸಿಯುತಿರುವ ಎತ್ತುಗಳು. ಆದರೆ ಭಂಡವಾಳಶಾಹಿ ಕೊಡತಕ್ಕ ಪತಿಫಲ ಮಾತ್ರ ನೂರು ಮಡಿ ಸಾಸಿರ ಮಡಿ ಹೆಚ್ಚು. ಆದರೆ ಪ್ರಪಂಚದ ಚರಿತ್ರೆಯನ್ನು ರೂಪಿಸಲು ತಮಗೆ ಹಕ್ಕಿಲ್ಲ. ಈ ಅವ್ಯವಸ್ಥೆಗಳನ್ನು ಕೊನೆಗಾಣಿಸುವ ಶಕ್ತಿ ತಮಗಿದೆ. ಮಾನವ ಸಂಸ್ಕೃತಿಯನ್ನು ವಿನಾಶದ ಹೆದ್ದಾರಿಯಲ್ಲಿ ಸಾಗಬಿಡಕೂಡದು, ತಡೆಯಬೇಕು. ಈ ಪರಿಯ ಕ್ರಾಂತಿಕಾರಿ ವಿಚಾರಗಳು ವಿಜ್ಞಾನಿಗಳ ಚಿತ್ತದಲ್ಲಿ ಸುಗ್ಗಿದುವು. ಅವರು ಜನಜಂಗುಳಿಯೊಡನೆ ಬೆರೆತು ಒಂದು ಹಿರಿಯ ಕ್ರಾಂತಿಯನ್ನೆಬ್ಬಿಸಿದರು; ಭಂಡವಾಳಿಶಾಹಿಯನ್ನು ಕೊನೆಗಾಣಿಸಲು ಮುಂದೆ ಬಂದರು. ಹಿಂದುಸ್ಥಾನದಲ್ಲಿ ಈ ವೈಜ್ಞಾನಿಕ ಕ್ರಾಂತಿ ಆವಿರ್ಭವಿಸಿತು. ಈ ಕಿಚ್ಚು ಕ್ರಮೇಣ ಆಸ್ಯದ ಎಲ್ಲ ಭಾಗಗಳಿಗೂ ಆಫ್ರಿಕಕ್ಕೂ ಪಸರಿಸಿತು. ಐದು ವರ್ಷಗಳಲ್ಲಿ ಈಗಿನ ಐಯರ ಲೇಂಡಿನಿಂದ ಹಿಡಿದು, ಶಾಂತಿ ಸಾಗರದವರೆಗಿನ ಭೂಭಾಗವೆಲ್ಲ ಸಾಮ್ಯವಾದದ ಆಡಳಿತವನ್ನು ಅಂಗೀಕರಿಸಿತು. ಅಮೆರಿಕೆಯಲ್ಲಿ ಮಾತ್ರ ಭಂಡವಾಳವಾದ ಇನ್ನೊಂದು ಅರ್ಧ ಶತಕದ ವರೆಗೆ ಗುಟುಕಶ್ವಾಸ ಬಿಡುತ್ತಾ ಜೀವಿಸಿತು. ಕೊನೆಗೆ ಭಂಡವಾಳಶಾಹಿ ತನ್ನ ಕೊನೆಯುಸಿರನ್ನು ಬಿಟ್ಟು ಮಾನವ ಸಮಾಜದ ಚರಿತ್ರೆಯಿಂದ ಕಣ್ಮರೆಯಾಯಿತು. ಭಂಡವಾಳಿವಾದ ಸತ್ತೊಡನೆಯೇ ಅದರ ಮರಿಗಳಾದ ವರ್ಣವ್ಯತ್ಯಾಸ, ಮತವ್ಯತ್ಯಾಸ ಮೊದಲಾದುವುಗಳೆಲ್ಲ ಅಳಿದು ಇಡಿ ವಿಶ್ವವೇ ಒಂದು ದೊಡ್ಡ ಕುಟುಂಬವಾಗಿ ಪರಿಣಮಿಸಿತು.

ಕ್ರಿಸ್ತ ಶಕ ೨೧೦೦ರಿಂದ ಪ್ರಪಂಚದ ಇತಿಹಾಸದಲ್ಲಿ ಒಂದು ಹೊಸ ಯುಗ ಆರಂಭವಾಯಿತು. ಈ ಯುಗವನ್ನು ನಾವು ಜನತಾ ಯುಗವೆಂದು ಕರೆಯಬಹುದು. ಜನಸಾಮಾನ್ಯರ ಆಸೆ ಆಕಾಂಕ್ಷೆಗಳಿಗೆ, ಅವರ ಸ್ವಾಭಾವಿಕ ಚೇತನಗಳಿಗೆ ವಿಕಾಸ ಹೊಂದಲು ಸಮಾಜ ಪೂರ್ಣ ಅವಕಾಶ ಒದಗಿಸಿ ಕೊಟ್ಟಿತು. ವರ್ಣ ಮತ್ತು ಮತವ್ಯತ್ಯಾಸಗಳು ಅಳಿದು ಮಾನವರೆಲ್ಲ ಒಂದು ಕುಟುಂಬಕ್ಕೆ ಸೇರಿದವರು ಎಂಬ ಭಾವನೆಯಿಂದ ಪ್ರೇರಿತವಾಗಿ ಒಂದು ಹೊಸ ಸಂಸ್ಕೃತಿಯನ್ನು ನಿರ್ಮಿಸಿತು. ಮಾನವ ಸಮಾಜದ ಇತಿಹಾಸದಲ್ಲಿ ಮೊದಲಿನ ಐದು ಶತಮಾನಗಳು ಉಜ್ವಲವಾದುವು. ಮಾನವನ ಶಕ್ತಿ, ಸಾಹಸ, ಕಲ್ಪನೆಗಳು ಕುಮರಿದುವು. ಮನುಷ್ಯಸಮಾಜವೇ ಒಂದು ಕುಟುಂಬ ಎಂಬ ಆದರ್ಶವೇ ಸಮಾಜ ಪುನರ್ಘಟನೆಯ ಗುರಿಯಾಯಿತು.

ಹೊಸ ಸಮಾಜವನ್ನು ನಿರ್ಮಿಸುವುದರಲ್ಲಿ ಮನುಷ್ಯ ತನ್ನ ಸರ್ವಶಕ್ತಿಗಳನ್ನು ಉಪಯೋಗಿಸತೊಡಗಿದ. ಈ ತನಕ ಮಾರಣ ಯಂತ್ರಗಳನ್ನು ನಿರ್ಮಿಸಲು ಉಪಯೋಗವಾಗುತಿದ್ದ ವಿಜ್ಞಾನವನ್ನು ಮನುಷ್ಯ ಬದುಕನ್ನು ಹಸನು ಗೊಳಿಸಬಲ್ಲ ನವಶಕ್ತಿಗಳನ್ನು ಅರಯುವುದರಲ್ಲಿ ವಿನಿಯೋಗಿಸತೊಡಗಿದ. ವಿಜ್ಞಾನಿಯ ಹೊಸ ಹೊಸ ಸಂಶೋಧನೆಗಳ ಫಲವಾಗಿ ಎಷ್ಟೋ ನೂತನ ಯಂತ್ರಗಳು ಉದಯವಾದುವು. ಅವನ ಸಾಹಸಮಯ ಎಸಕಗಳ ಫಲವಾಗಿ ನೆಲ ಜಲ ಆಕಾಶಗಳಲ್ಲಿ ಸಂಚರಿಸುವ ವಾಹನಗಳಿಗೆ ಮನುಷ್ಯ ಪರಮಾಣು ಶಕ್ತಿಯನ್ನು ಉಪಯೋಗಿಸತೊಡಗಿದ. ಶಕ್ತಿಯನ್ನು ಉತ್ಪಾದಿಸಲು ಕಲ್ಲಿದ್ದಲು ಪೆಟ್ರೋಲುಗಳ ಅಗತ್ಯವೇ ಉಳಿಯಲಿಲ್ಲ. ಸಾವಿರಾರು ಮಂದಿಯನ್ನು ಒಯ್ಯಬಲ್ಲ ಬೃಹದಾಕಾರದ ಆಕಾಶಯಾನಗಳು ಸಿದ್ಧವಾದುವು. ಬೇಸಾಯ ವನ್ನು ಜನರು ಒಬ್ಬಂಟಿಗರಾಗಿ ನಡೆಸದೆ, ಸಾವಿರಾರು ಮಂದಿ ಕೂಡಿ ನಡೆಸ ತೊಡಗಿದರು. ಉಳುವ, ಕೊಯ್ಯುವ ನೆಡುವ ಯಂತ್ರಗಳನ್ನು ವ್ಯವಸಾಯ ಕ್ಷೇತ್ರಗಳಲ್ಲಿ ಜನರು ಬಳಸತೊಡಗಿದರು.

ಜನರು ಬೆಟ್ಟಗುಡ್ಡಗಳನ್ನು ಕಡಿದು ಬಯಲು ಮಾಡಿದರು. ಹಿಂದೂ ದೇಶದಲ್ಲಿ ಉತ್ತರದ ಹಿಮಾಲಯ ಪರ್ವತವೊಂದನ್ನುಳಿದು ಇತರ ಪರ್ವತಗಳೆಲ್ಲ ನಿರ್ನಾಮವಾದುವು. ಸಿಂಧು ಮತ್ತು ಗಂಗಾ ನದಿಗಳನ್ನು ಒಂದುಗೂಡಿಸುವ ಒಂದು ಬೃಹದಾಕಾರದ ಕಾಲುವೆಯನ್ನು ಕಡಿದರು. ಈಗ ನರ್ಮದಾ ನದಿಯಿರುವ ಎಡೆಯಲ್ಲಿ ಅರಬಿ ಸಮುದ್ರ ಬಂಗಾಳ ಕೊಲ್ಲಿಗಳನ್ನು ಒಂದುಗೂಡಿಸುವ ಮಹಾ ಕಾಲುವೆಯೊಂದನ್ನು ನಿರ್ಮಿಸಿದರು. ಯಾಂತ್ರಿಕ ಬೇಸಾಯದೊಡನೆ ಗ್ರಾಮಗಳು ಅಳಿಯತೊಡಗಿದುವು; ಐವತ್ತು ನೂರು ಮೈಲುಗಳಿಗೆ ಒಂದರಂತೆ ಜನರು ಪಟ್ಟಣಗಳನ್ನು ಕಟ್ಟತೊಡಗಿದರು. ನೂರಾರು ಮೈಲುಗಳಷ್ಟು ಉದ್ದವಾದ ಬಯಲುಗಳನ್ನು ಯಂತ್ರಗಳಿಂದ ಉತ್ತು ಬಿತ್ತಿ ಬೆಳೆ ತೆಗೆಯತೊಡಗಿದರು. ನೂರು ಐವತ್ತು ಮೈಲುಗಳಿಗೊಂದರಂತೆ ಮಹಾ ನಗರಗಳು ಮೂಡಿದುವು. ಈ ನಗರಗಳಲ್ಲಲ್ಲದೆ ಇತರ ಎಡೆಗಳಲ್ಲಿ ಜನ ವಾಸಿಸು ವುದೇ ಅಪರೂಪವಾಯಿತು.

ಬೆಟ್ಟ ಗುಡ್ಡಗಳನ್ನೆಲ್ಲ ಕಡಿದು ನೆಲವನ್ನು ಬಯಲು ಮಾಡಿದುದರಿಂದ ಪ್ರಕೃತಿಯಲ್ಲಿ ಅನೇಕ ಮಾರ್ಪುಗಳು ತಲೆದೋರಿದುವು. ಹಿಂದೂಸ್ಥಾನದಲ್ಲಿ ಧಾರಾಳವಾಗಿ ಸುರಿಯುತಿದ್ದ ಮಳೆಯೇ ಇಲ್ಲವಾಗತೊಡಗಿತು. ಅವರು

ಹಿಮಾಲಯ ಪರ್ವತದ ನಾಲುಗಳನ್ನೇ ಕಡಿದು ಬಂಗಾಳ ಕೊಲ್ಲಿಯಲ್ಲಿ ತುಂಬು ತಿದ್ದರೇನೊ. ಆದರೆ ಉತ್ತರದಿಂದ ಬೀಸುವ ಸೈಬೀರಿಯಾದ ಚಳಿಗಾಳಿ ಹಿಂದೂಸ್ಥಾನಕ್ಕೂ ಬಾಧಿಸಬಹುದೆಂಬ ಅಂಜಿಕೆಯಿಂದ ಹಿಮಾಲಯವನ್ನು ಹಾಗೆಯೇ ಉಳಿಸಿದರು. ಪರ್ವತಗಳಿಲ್ಲದೆ ಹಿಂದೂಸ್ಥಾನದಲ್ಲಿ ಕಾಲಕ್ಕೆ ಸರಿಯಾಗಿ ಮಳೆಯಾಗಲಿಲ್ಲ. ಭೀಕರ ಬರಗಾಲದ ಅಂಜಿಕೆ ತಲೆದೋರಿತು. ಆದರೆ ಬಂಗಾಲ ಬರಗಾಲದಂತೆ ಜನಹೊಟ್ಟೆಗೆ ಕೂಳಿಲ್ಲದೆ ನಾಯಲಿಲ್ಲ. ಆಕಾಶ ವಿಮಾನಗಳ ಮೂಲಕ ಅಮೇರಿಕಗಳಿಂದ ದವಸ ಧಾನ್ಯಗಳನ್ನು ತರಿಸಿ ಜನರನ್ನು ಮೃತ್ಯುವಿನಿಂದ ವಿಶ್ವ ಸರಕಾರ ಕಾಪಾಡಿತು. ಕಾಲಕ್ಕೆ ಸರಿಯಾಗಿ ಮಳೆಗರೆಯಲು ಹೊಸ ಶೋಧನೆಗಳನ್ನು ವಿಜ್ಞಾನಿಗಳು ಪ್ರಯೋಗಶಾಲೆಗಳಲ್ಲಿ ನಡೆಸಿದರು. ಅವರ ಸಂಶೋಧನೆಗಳು ಯಶಸ್ವಿಯಾದುವು. ಕಡಲಿನಿಂದೇಳುವ ಮೋಡಗಳನ್ನು ತಣಿಸಿ ಮಳೆಗರೆವ ಹೊಸಬಗೆಯ ಯಂತ್ರವೊಂದನ್ನು ಅವರು ಕಂಡುಹಿಡಿದರು. ಮಳೆ ಬೇಕಾದಾಗ ಈ ಹೊಸಬಗೆಯ ಯಂತ್ರವನ್ನು ವಿಮಾನಗಳಲ್ಲಿ ಮೋಡಗಳಿದ್ದೆಡೆಗೆ ಒಯ್ಯುತಿದ್ದರು; ಮೋಡಗಳನ್ನು ತಣಿಸುತಿದ್ದರು; ಮೋಡಗಳು ಧಾರೆಯಾಗಿ ನೆಲದ ಮೇಲೆ ಮಳೆಗರೆಯುತಿದ್ದುವು. ಈ ಸಂಶೋಧನೆಯ ಫಲವಾಗಿ ಈ ತನಕ ಮರುಭೂಮಿಗಳೆನಿಸಿದ್ದ ಸಹರ, ಅರೇಬಿಯಾ ಮೊದಲಾದ ಭೂಭಾಗಗಳೆಲ್ಲ ಫಲಸಂಪನ್ನವಾದುವು. ಜನ ಸಂಪನ್ನವಾದುವು. ಪ್ರಪಂಚದಲ್ಲಿ ಮರುಭೂಮಿಗಳ ಹೆಸರೇ ಅಳಿಸಿಹೋಯಿತು, ಕಡಲಿನಿಂದ ಆವಿಯಾಗಿ ಮೇಲೆದ್ದ ಮೋಡಗಳನ್ನು ಬೇಕಾದೆಡೆಗೆ ಒಯ್ಯಲಿಹ ಕೃತಕ ಮಾರುತಗಳು ಬಳಕೆಗೆ ಬಂದುವು. ಈ ಮಾರುತಗಳ ಆವಿರ್ಭಾವದೊಡನೆ ಅಕಾಲ ವೃಷ್ಟಿ ಅನಾವೃಷ್ಟಿಗಳು ಇಲ್ಲವಾದುವು.

ಕಡಲಲ್ಲಿ ಒಂದರ ಮೇಲೆ ಇನ್ನೊಂದರಂತೆ ಏಳುವ ಅಲೆಗಳ ಹಾಗೆ ಹೊಸ ಹೊಸ ಸಂಶೋಧನೆಗಳು ಉದಯವಾದುವು. ವಿಷಘಾತಕಗಳ ಉಪಯೋಗದಿಂದ ಪ್ರಪಂಚದಲ್ಲಿದ್ದ ಹಲವು ಬಗೆಯ ಸೋಂಕು ರೋಗಗಳ ಹೆಸರನ್ನು ವಿಜ್ಞಾನಿಗಳು ತೊಡೆದುಹಾಕಿದರು. ಮನುಷ್ಯನ ದೇಹ ಬುದ್ಧಿಗಳ ಚೇತನಗಳನ್ನು ಹೆಚ್ಚಿಸಲು ಹಲವು ಬಗೆಯ ನೂತನ ತ್ರಾಣಿಕಗಳನ್ನು ಕಂಡುಹಿಡಿದರು. ಮಾನವನ ಆಯುಃಪ್ರಮಾಣ ನೂರೈವತ್ತು ವರುಷಗಳಿಗೇರಿತು. ನೆಲ-ಜಲಾಕಾಶಗಳನ್ನು ಗೆದ್ದ ಮನುಷ್ಯನು ಇತರ ಗ್ರಹಗಳನ್ನು ಗೆದ್ದು ಅಲ್ಲಿ ಮಾನವ ಸಂಸ್ಕೃತಿಯ ಪತಾಕೆಯನ್ನು ನೆಡಲು ಹವಣಿಸಿದ. ಎಲ್ಲಿಯೂ

ನಿಲ್ಲದೆ ಲಕ್ಷಾಂತರ ಮೈಲುಗಳತನಕ ಹಾರಾಡಬಲ್ಲ ವಿಮಾನಗಳು ನಿರ್ಮಾಣ ವಾದುವು. ಪರಮಾಣು ಶಕ್ತಿಯನ್ನಲ್ಲದೆ, ಸೂರ್ಯನಿಂದ ದೊರಕುವ ಶಾಖ ವನ್ನು ಶಕ್ತಿಯಾಗಿ ಮಾರ್ಪಡಿಸಿ, ಅದನ್ನು ಉಪಯೋಗಿಸುವ ಬಗೆಯನ್ನು ವಿಜ್ಞಾನಿಗಳು ಕಂಡುಹಿಡಿದರು. ಈ ಶೋಧದಿಂದ ಗ್ರಹಾಂತರ ಪ್ರವಾಸ ಸುಲಭ ಸಾಧ್ಯವೆನಿಸಿತು. ವಿಶ್ವ ಜನಾಂಗದ ಉದಯದ ಅನಂತರ ಐದನೇ ಶತಮಾನ ದಲ್ಲಿ ಮಾನವನು ಮಂಗಳ ಗ್ರಹದಲ್ಲಿ ಮೊದಲನೆಯ ಬಾರಿ ಅಡಿಗಳನ್ನಿರಿಸಿದ. ಆ ಗ್ರಹದ ಸ್ಥಿತಿ, ಅಲ್ಲಿನ ನಿವಾಸಿಗಳ ಪರಿಚಯ ಸಂಪಾದಿಸಿದ. ಆದರೆ ಮಂಗಳ ಗ್ರಹದವರು ವಿಜ್ಞಾನದಲ್ಲಿ ಮಾನವನಿಗಿಂತಲೂ ಮುಂದುವರಿದಿದ್ದರು. ಆದುದ ರಿಂದ ಮಂಗಳಿಗರನ್ನು ತನ್ನ ಅಂಕೆಗೆ ಒಳಪಡಿಸಿ ಅಲ್ಲಿ ತನ್ನ ವಸಾಹತುಗಳನ್ನು ಸ್ಥಾಪಿಸುವುದು ಮನುಷ್ಯನಿಗೆ ಶಕ್ಯವೆನಿಸಲಿಲ್ಲ. ಮಂಗಳಿಗರೊಡನೆ ಮನುಷ್ಯ ನನ್ನು ಹೋಲಿಸಿದಾಗ, ಅವನು ಕಿರಿಯ ತಮ್ಮನಂತಿದ್ದ. ಮಂಗಳಿಗರ ಸಂಪರ್ಕ ಮಾನವ ಜೀವನದಲ್ಲೊಂದು ಮಹಾ ಕ್ರಾಂತಿಯನ್ನುಂಟು ಮಾಡದಿರಲಿಲ್ಲ. ವೈಜ್ಞಾನಿಕ ಪ್ರಪಂಚದಲ್ಲಿ ಒಂದು ಹಿರಿಯ ವಿಪ್ಲವವುಂಟಾಯಿತು.

ಮಂಗಳಿಗರು ವಿಜ್ಞಾನದಲ್ಲಿ ಬಹು ಮುಂದುವರಿದಿದ್ದರೂ, ಜೀವನದ ಇತರ ರಂಗಗಳಲ್ಲಿ ಅವರು ಹಿಂದುಳಿದಿದ್ದರು. ರಾಜಕಾರಣ, ಸಮಾಜಶಾಸ್ತ್ರ, ಮನಃಶಾಸ್ತ್ರ ಈ ಭಾಗಗಳಲ್ಲಿ ಅವರು ಹಸುಳೆಗಳಾಗಿದ್ದರು. ಮಂಗಳಿಗರ ವಿಚಾರ ಶಕ್ತಿ ಏಕಮುಖವಾಗಿ ಬೆಳೆದುದರಿಂದ, ಅಲ್ಲಿ ವಿಜ್ಞಾನಿಗಳಿಗೆ ದೇವತ್ವ ದೊರಕಿ ದ್ದಿತು. ವಿಜ್ಞಾನಿಯ ತುಟಿಗಳಿಂದ ಉದುರಿದ ಮಾತುಗಳೇ ಅವರ ವೇದ ವಾಕ್ಯಗಳು. ಅವರ ಆಹಾರ, ಉಡಿಗೆತೊಡಿಗೆ, ವಿಹಾರ ಇವೆಲ್ಲ ವಿಜ್ಞಾನಿಗಳು ಹಾಕಿಕೊಟ್ಟ ನಿಯಮಗಳಿಗೆ ಅನುಸಾರವಾಗಿದ್ದುವು. ಮಂಗಳಿಗರ ಸಂಪರ್ಕ ದಿಂದ, ಮಾನವನಲ್ಲಿ ಐದು ಶತಮಾನಗಳತನಕ ಬೆಳಗಿದ ವಿಚಾರ ಸ್ವಾತಂತ್ರ್ಯದ ಪ್ರಭೆ ಕುಂದತೊಡಗಿತು. ಅವರು ತಮಗೆ ಅರಿಯದಂತೆಯೇ, ವಿಜ್ಞಾನಿಗಳನ್ನು ಪೂಜಿಸತೊಡಗಿದರು; ಅವರನ್ನು ಸರ್ವಾಧಿಕಾರದ ಗದ್ದುಗೆಯ ಮೇಲೇರಿಸಿದರು. ಪ್ರಜಾಸಮ್ಮತಿಯಂತೆ ನಡೆಯುತ್ತಿದ್ದ ವಿಶ್ವ ಸರಕಾರ, ವಿಜ್ಞಾನಿಗಳ ಸರ್ವಾಧಿ ಕಾರವಾಗಿ ರೂಪಾಂತರವನ್ನೈದಿತು.

ಅಂದಿನ ಚಲಚಿತ್ರ ಮಂಗಳ ಗ್ರಹದ ಸಂಪರ್ಕದ ಪರಿಣಾಮವಾಗಿ ವಿಜ್ಞಾನಿಗಳ ಸರ್ವಾಧಿಕಾರ ಆರಂಭಿಸುವತನಕದ ಮಾನವ ಸಮಾಜದ ಇತಿ ಹಾಸವಾಗಿದ್ದಿತು. ಮಾನವ ಸಮಾಜದ ಚರಿತ್ರೆಯ ಉತ್ತರಾರ್ಧವನ್ನು

ಮರುದಿನ ಪ್ರದರ್ಶಿಸಲಿರುವರೆಂದು ನಾನು ಮೀನಳಿಂದ ಅರಿತೆ. ಚಿತ್ರ ಕೊನೆಗೊಳ್ಳಲು ನಾವು ಕುಳಿತಲ್ಲಿಂದ ಎದ್ದು ನಿಂತೆವು; ಚಲಚಿತ್ರ ಮಂದಿರದಿಂದ ಹೊಬಂರದೆವು.

ಐದು ಶತಮಾನಗಳ ಚರಿತ್ರೆಯನ್ನು ಚಲಚಿತ್ರದ ರೂಪದಲ್ಲಿ ಎರಕ ಹೊಯ್ಯುವುದೆಂದರೆ ಒಂದು ಹಿರಿಯ ಸಾಹಸವೇ ಸರಿ. ಅನಂತರದ ಐದು ಶತಮಾನಗಳ ಚರಿತ್ರೆಯನ್ನು ಅರಿಯಬೇಕೆಂದು ನನಗೆ ತುಂಬಾ ಕುತೂಹಲ ವಿದ್ದಿತು. ಆದರೆ ಅದು ಮುಂದಿನ ದಿನದ ಕಾರ್ಯಕ್ರಮದಲ್ಲಿ ಅಡಕವಾಗಿತ್ತು. ಆ ಕಾಲದಲ್ಲಿ ಚಲಚಿತ್ರ ಪ್ರದರ್ಶನದ ಗುರಿ ಮನೋರಂಜನೆ ಮಾತ್ರವಾಗಿರಲಿಲ್ಲ. ವಿಜ್ಞಾನಿಗಳು ಅದನ್ನು ತಮ್ಮ ಪ್ರಚಾರ ಸಾಮಗ್ರಿಯಾಗಿ ಉಪಯೋಗಿಸಿಕೊಂಡಿದ್ದರು. ವಿಜ್ಞಾನ ಯುಗದ ಮೇಲ್ಮೆಯನ್ನು ಜನರಲ್ಲಿ ನಾಟಲೋಸುಗ ಅವರು ಚಿತ್ರಗಳನ್ನು ನಿರ್ಮಿಸುತಿದ್ದರು; ಪ್ರದರ್ಶಿಸುತಿದ್ದರು. ಪ್ರತಿಯೊಂದು ಬಗೆಯ ಉತ್ಪಾದನೆಯೂ ವಿಶ್ವ ಸರಕಾರದ ಸ್ವತ್ತಾಗಿದ್ದುದರಿಂದ ವ್ಯಕ್ತಿಗಳು ಚಿತ್ರನಿರ್ಮಾಣಕ್ಕೆ ಕೈ ಹಚ್ಚಲು ಬರುತಿದ್ದಿಲ್ಲ. ವಿಜ್ಞಾನಿಗಳು ತಯಾರಿಸಿದ ಚಿತ್ರಗಳನ್ನೇ ಜನತೆ ನೋಡಿ ಸಂತೋಷ ಪಡಬೇಕಾಗಿದ್ದಿತು.

"ಈ ಚಲಚಿತ್ರ ತೋರಿಸಿದ ಬಗೆಯಾವುದೆಂದು ಹೇಳಿ, ನೋಡುವ." ಆಚಾರ್ಯರು ಮಾತು ನಿಲ್ಲಿಸಿ ನಮ್ಮ ಮೊಗ ನೋಡಿದರು.

"ನಮ್ಮ ಚಲಚಿತ್ರಗಳಂತೆ ವಿದ್ಯುತ್ತಿನ ಸಹಾಯದಿಂದ" ಗೋಪು ನುಡಿದ.

"ವಿದ್ಯುತ್ತಿನ ಪ್ರಭೆಯೇನೋ ಇತ್ತು. ಆದರೆ ಚಿತ್ರ ತೋರಿಸಲು ಫಿಲ ಮಾತ್ರ ಆ ಮಂದಿರದಲ್ಲಿರಲಿಲ್ಲ." ಆಚಾರ್ಯರ ಮೊಗ ಗೆಲವು ಬಣ್ಣವನ್ನು ತಳೆದಿತು.

"ಫಿಲ್ಮ್ ಇಲ್ಲದೆ ಚಲಚಿತ್ರ ಪ್ರದರ್ಶನ ಹೇಗೆ ನಡೆಯಬಲ್ಲುದು?" ನಾನು ಪ್ರಶ್ನಿಸಿದೆ.

"ಈ ರೀತಿ ನೀವು ಕೂಗಾಡದಿರಿ. ನಿದಾನವಾಗಿ ಎಲ್ಲ ಹೇಳುವೆನು." ಆಚಾರ್ಯರು ಮರಳಿ ತುಟಿ ಬಿಚ್ಚಿದರು. ಆ ದಿನಗಳಲ್ಲಿ ಟೆಲಿವಿಸನ್ ಬಹಳ ಬಳಕೆಗೆ ಬಂದಿತ್ತು. ಚಲಚಿತ್ರಗಳೆಲ್ಲ ಟೆಲಿವಿಸನ್ನಿನ ನೆರವಿನಿಂದಲೇ ನಡೆಯುತಿದ್ದುವು. ಹತ್ತಿಪ್ಪತ್ತು ನಗರಗಳಿಗೊಂದರಂತೆ ಟೆಲಿವಿಸನ್ ಕೇಂದ್ರಗಳಿದ್ದುವು. ಆ ಕೇಂದ್ರದಲ್ಲಿ ಪ್ರದರ್ಶಿಸಿದ ಚಲಚಿತ್ರಗಳನ್ನು ಟೆಲಿವಿಸನ್ನುಗಳು ಆ ಕೇಂದ್ರಕ್ಕೆ

ಸೇರಿದ ನಗರಿಗಳಿಗೆಲ್ಲ ಬಿಂಬಿಸುತಿದ್ದುವು. ಉಪಕೇಂದ್ರಗಳಲ್ಲಿರುವ ರೂಪ ಗ್ರಾಹಕ ಯಂತ್ರಗಳು ಈ ರೂಪಗಳನ್ನು ಸೆರೆವಿಡಿದು, ಚಲಚಿತ್ರ ಮಂದಿರಗಳಲ್ಲಿ ಬಿಂಬಿಸುತಿದ್ದುವು. ಈ ರೀತಿಯಾಗಿ ಚಲಚಿತ್ರ ಪ್ರದರ್ಶನಗಳು ವಿಶೇಷ ವೆಚ್ಚವಿಲ್ಲದೆ ಜರಗುತಿದ್ದುವು. ಚಲಚಿತ್ರಗಳಾದರೂ ಮೂಕ ಚಿತ್ರಗಳಲ್ಲ ಸ್ವರಯುಕ್ತವಾದುವು. ರೇಡಿಯೋ ಹಂಚಿಕೆಯಿಂದ ಧ್ವನಿಯನ್ನು ಒದಗಿಸುತಿದ್ದರು.

೫

‘‘ ನಗರದಲ್ಲಿ ಶಿಕ್ಷಣ ಕೇಂದ್ರಗಳಿಲ್ಲವೇ ? ” ಚಲಚಿತ್ರ ಮಂದಿರದಿಂದ ಹೊರಬಂದಾಗ ನಾನು ಜತೆಗಾತಿಯನ್ನು ಪ್ರಶ್ನಿಸಿದೆ.

‘‘ ಇವೆ. ” ಎಂದು ಮೀನಾ ಕಣ್ಣುಗಳನ್ನು ಅಗಲಿಸಿದಳು.

‘‘ ನಿಮ್ಮ ಜನರ ಶಿಕ್ಷಣಕ್ರಮ ಅರಿಯಬೇಕೆಂದು ನನಗೆ ಕುತೂಹಲ ಹುಟ್ಟಿದೆ. ನಿಮ್ಮೂರ ಶಾಲೆಗಳನ್ನು ತೋರಿಸುವೆಯಾ ? ” ಎಂದು ಆಕೆಗೆ ಬಿನ್ನವಿಸಿದೆ.

‘‘ ಶಾಲೆಗಳನ್ನು ನೋಡುವುದೆಂದರೆ ಸುಲಭದ ಕೆಲಸವಲ್ಲ. ” ಮೀನಾ ಉಸುರಿದಳು. ‘‘ ನೋಡುವ ಮುನ್ನ ಶಿಕ್ಷಣ ವಿಭಾಗದ ಮುಖ್ಯಾಧಿಕಾರಿಯ ಅನುಮತಿಯನ್ನು ಪಡೆಯಬೇಕು. ”

‘‘ ಶಿಕ್ಷಣ ಕೇಂದ್ರ ನೋಡಲು ಅಧಿಕಾರಿ ಅನುಮತಿಸನೆ ? ”

‘‘ ಕೊಡಬಹುದು ಅನುಮತಿಯನ್ನು ; ಆದರೆ ಸಾಮಾನ್ಯರಿಗೆ. ನಿನ್ನನ್ನು ನೋಡಿದೊಡನೆಯೇ ನೀನು ಈ ಗ್ರಹದವನು ಅಲ್ಲವೆಂದು ಅವರು ತಿಳಿಯುವರು. ಆಗ ಪ್ರವೇಶ ದೊರಕಲು ಇನ್ನಷ್ಟು ಕಷ್ಟವಾಗುವುದು. ”

‘‘ ಇರಲಿ. ನನ್ನ ಕರೆದುಕೊಂಡು ಹೋಗು. ನಿಮ್ಮ ಶಿಕ್ಷಣಾಧಿಕಾರಿಯನ್ನು ಕಂಡು ಮಾತಾಡಿ ಸಮ್ಮತಿಯನ್ನು ಪಡೆಯುವೆನು. ’’ ಎಂದು ನಾನು ಉಸುರಿದೆ. ಶಿಕ್ಷಣ ಕೇಂದ್ರವನ್ನು ನೋಡಿಯೇ ತೀರಬೇಕೆಂಬ ಹಟ ನನ್ನಲ್ಲುಂಟಾಯಿತು. ನಾನು ನಿರ್ಬಂಧಿಸಿದುದರಿಂದ ಮೀನಾ ನನ್ನನ್ನು ಕರೆದೊಯ್ಯಲು ಒಪ್ಪಿದಳು.

ಶಿಕ್ಷಣ ಕೇಂದ್ರ ನಗರದೊಳಗಿರಲಿಲ್ಲ. ಅದು ನಗರದಿಂದ ಹತ್ತೆಂಟು ಮೈಲುಗಳ ಅಂತರದಲ್ಲಿದ್ದಿತು. ನಾವು ನಾಲ್ಕಾರು ಕಾಲುವೆಗಳು ಬಂದು ಸೇರುವ ಒಂದೆಡೆಗೆ ತೆರಳಿದೆವು. ವಿದ್ಯಾಲಯಕ್ಕೆ ತೆರಳುವ ದೋಣಿಯೊಂದು

ಅಲ್ಲಿ ಅಣಿಯಾಗಿದ್ದಿತು. ನಾವು ದೋಣಿಯನ್ನೇರಿದೆವು. ನಮ್ಮಲ್ಲಿ ಬಸ್ಸು ಹತ್ತಲು ಹಣಕೊಟ್ಟು ಟಿಕೇಟು ಪಡೆವಂತೆ, ಅಲ್ಲಿ ಸಂಚಾರ ಮಾಡಲು ಬಾಡಿಗೆ ಕೊಡುವ ರೂಢಿಯಿರಲಿಲ್ಲ. ಜನರನ್ನು ಉಚಿತವಾಗಿಯೇ ದೋಣಿಗಳಲ್ಲಿ ಇತರ ವಾಹನಗಳಲ್ಲಿ ಒಯ್ಯುತ್ತಿದ್ದರು. ಯಾರು ಬೇಕಾದರೂ ದೋಣಿಯನ್ನೇರಿ ಪ್ರಯಾಣ ಮಾಡಬಹುದು. ತಡೆ ಆತಂಕಗಳಿಲ್ಲ. ನಾವು ದೋಣಿಯನ್ನೇರಿ ಕುಳಿತೆವು. ಅದು ಅತಿ ವೇಗವಾಗಿ ನಮ್ಮನ್ನು ಕರೆದೊಯ್ದಿತು. ದೋಣಿಯಲ್ಲಿದ್ದ ಪಯಣಿಗರು ಅವರಂತಿಲ್ಲದ ನನ್ನನ್ನು ಎವೆಯಿಕ್ಕದೆ ನಿರುಕಿಸಿದರು. ಮೀನಾ ನನ್ನ ಜೊತೆಯಲ್ಲಿದ್ದುದರಿಂದ ಅವರೆಲ್ಲರ ಮಾತುಗಳ ಸರಳಂಬುಗಳಿಗೆ ನಾನು ಎದೆಯೊಡ್ಡಬೇಕಾಗಿ ಬರಲಿಲ್ಲ. ಅವರು ಕೇಳಿದ ಪ್ರಶ್ನೆಗಳಿಗೆ ಮೀನಾ ಉತ್ತರ ಕೊಟ್ಟು ಸಮಾಧಾನ ಪಡಿಸುತ್ತಿದ್ದಳು. ನಾನು ಗೊಂಬೆಯಂತೆ ಕುಳಿತು ಅವರ ನುಡಿಗಳನ್ನು ಆಲಿಸುತ್ತಿದ್ದೆ. ನಲವತ್ತು ತಲೆಮಾರು ಮುಂದಿನ ಜನಾಂಗದ ಮೆದುಳನ್ನು ಕೆಣಕುತ್ತಲಿಹ ಪ್ರಶ್ನೆಗಳನ್ನು ಅರಿಯಲು ಹವಣಿಸುತ್ತಿದ್ದೆ.

ಈ ಜನರು ನೂರಾರು ಚಿಂತೆಗಳ ಜಾಳಿಗೆಯಲ್ಲಿ ಸಿಕ್ಕಿದ ಹಗುರು ಮನಸ್ಸಿನವರೆಂದು ನನಗೆ ಅರಿವಾಯಿತು. ಅವರಿಗೆ ಬಿಡಿಸಲು, ಉತ್ತರ ಕಂಡು ಹಿಡಿಯಲು ಯಾವ ಸಮಸ್ಯೆಯೂ ಇರಲಿಲ್ಲ. ಅವರ ಸಮಸ್ಯೆಗಳನ್ನೆಲ್ಲ ವಿಜ್ಞಾನಿಗಳು ಬಗೆಹರಿಸುತ್ತಿದ್ದರು; ಆ ಚಿಂತೆಯಿಂದ ಅವರನ್ನು ಪಾರು ಮಾಡುತ್ತಿದ್ದರು. ತುತ್ತಿನ ಚೀಲದ ಪ್ರಶ್ನೆಯನ್ನು ಐದು ತಲೆಮಾರು ಹಿಂದೆಯೇ ಸಮಾಜ ಬಗೆಹರಿಸಿದ್ದಿತು. ಶ್ರಮವಹವೆನಿಸಿದ ದುಡಿಮೆಗಳಿಗೆ ಹೆಗಲೊಡ್ಡಬೇಕಾದ ಹೊಣೆಗಾರಿಕೆಯೂ ಅವರಿಗಿರಲಿಲ್ಲ. ಆ ಮಾಳ್ಕೆಗಳನ್ನು ಯಂತ್ರಗಳೂ, ಯಾಂತ್ರಿಕ ಮನುಷ್ಯರೂ ನಿರ್ವಹಿಸುತ್ತಿದ್ದರು. ಅವರ ಬಾಳುವೆಯಾದರೂ ಗುರಿಯಿಲ್ಲದೆ ಸಾಗುತಿಹ ದೋಣಿಯಂತಿತ್ತು. ಮಧ್ಯಾಹ್ನ ಉಂಡ ಬಿಸ್ಕೆಟ್ಟು ಮತ್ತು ಗುಳಿಗೆಗಳು, ನೋಡಿದ ಚಲಚಿತ್ರ, ಕೇಳಿದ ಸಂಗೀತ, ಮಂಗಳ ಲೋಕಕ್ಕೆ ಹಾರಿದ ವಿಮಾನ ಇತ್ಯಾದಿ ಅವರ ನಿತ್ಯಜೀವನದ ಸಂಗತಿಗಳಲ್ಲದೆ ಬೇರೆ ಯಾವ ವಿಷಯಗಳೂ ಅವರ ಮಾತುಕತೆಗಳಲ್ಲಿ ಅಡಕವಾಗಿರಲಿಲ್ಲ. ಸರಕಾರ, ಆಡಳಿತ, ಕಾಯಿದೆಗಳು ಮೊದಲಾದ ವಿಷಯಗಳ ಸುಳಿವಂತೂ ಅವರ ಸಂಭಾಷಣೆಯಲ್ಲಿ ನೋಡಸಿಗದು. ಅದೊಂದು ದೊಡ್ಡ ನಗರ. ಎರಡು ಲಕ್ಷಕ್ಕೆ ಮೇಲ್ಪಟ್ಟು ಜನಸಂಖ್ಯೆ ಇರಬಹುದೆಂದು ನಾನು ಊಹಿಸಿದ್ದೆ. ದೋಣಿಯಲ್ಲಾದರೂ ಇನ್ನೂರಕ್ಕೆ ಮೇಲ್ಪಟ್ಟು ಪಯಣಿಗರಿದ್ದರು. ಆದರೆ

ನಾಗರಿಕರೆನಿಸಿದ ಈ ಜನರ ಕೈಗಳಲ್ಲಿ ಒಂದೇ ಒಂದು ವೃತ್ತಪತ್ರಿಕೆಯಾಗಲೀ, ಪುಸ್ತಕವಾಗಲೀ ಕಂಡುಬರಲಿಲ್ಲ. ಹೀಗೆ ವೃತ್ತಪತ್ರಿಕೆಗಳು ಮತ್ತು ಪುಸ್ತಕಗಳು ಇಲ್ಲದುದರಿಂದ ಈ ಜನಾಂಗ ಓದುಬರಹ ಅರಿಯದವರು ಇರಬಹುದೇ ಎಂಬ ಸಂದೇಹ ನನ್ನ ಎದೆಯಲ್ಲಿ ಮೂಡಿತು. ಆದುದರಿಂದ ಪಕ್ಕದಲ್ಲಿ ಕುಳಿತಿದ್ದ ಮೀನಾಳನ್ನು ಪ್ರಶ್ನಿಸಿದೆ "ನೀವು ಪತ್ರಿಕೆ ಮತ್ತು ಪುಸ್ತಕಗಳನ್ನು ಓದುವುದಿಲ್ಲವೇ ?"

ನನ್ನ ನುಡಿ ಆಕೆಗೆ ಅರ್ಥವಾಗಲಿಲ್ಲ. "ಪತ್ರಿಕೆ ಪುಸ್ತಕಗಳು?" ಎಂದು ನನ್ನ ಮಾತನ್ನೇ ಅವಳು ಮರಳಿ ಉಚ್ಚರಿಸಿದಳು.

"ಹೌದು! ಪತ್ರಿಕೆ ಪುಸ್ತಕಗಳು!" ಈ ಸರ್ತಿ ನನ್ನ ಅಭಿಪ್ರಾಯವನ್ನು ಸಂಜ್ಞೆಗಳ ಮೂಲಕ ಅರುಹಿದೆ.

ನನ್ನ ಮುಂದುಗಡೆ ಕುಳಿತಿದ್ದವ ಇತರ ಪಯಣಿಗರಿಗಿಂತ ತುಸು ಹೆಚ್ಚು ಮೆದುಳುಳ್ಳವನು. ಬೇರೆಯವರಿಗೆ ಅರ್ಥವಾಗದ ನನ್ನ ನುಡಿಯನ್ನು ಆತ ತಿಳಿದುಕೊಂಡ. "ಪುಸ್ತಕ ಪತ್ರಿಕೆಗಳು ನಮಗೇಕೆ? ಬಾನುಲಿ ಈ ಪ್ರಪಂಚದ ಸುದ್ದಿಗಳನ್ನು ಮಾತ್ರವಲ್ಲ, ಮಂಗಳ ಗ್ರಹದ ಸಮಾಚಾರಗಳನ್ನೂ ತಿಳಿಸುತದೆ. ಪುಸ್ತಕಗಳನ್ನು ಓದುವ ಯೋಗ್ಯತೆ ನಮಗಿಲ್ಲ."

"ಏಕೆ ಆ ಯೋಗ್ಯತೆ ನಿಮಗಿಲ್ಲ ? ಓದುವುದು ಬರೆಯುವುದು ಪ್ರತಿಯೊಬ್ಬ ಮಾನವನ ಜನ್ಮಸಿದ್ಧವಾದ ಹಕ್ಕು."

"ನಿನ್ನ ಮಾತು ಕೇಳುವಾಗ ನೀನು ಈ ಗ್ರಹದವನಲ್ಲವೆಂದು ತೋರುತದೆ. ಮಂಗಳ ಗ್ರಹದಲ್ಲಿಯೂ ಈ ಬಗೆಯ ಅಭಿಪ್ರಾಯ ಇರದು." ಮೊದಲು ಮಾತಾಡಿದ ಪಯಣಿಗನೇ ನನ್ನ ಪ್ರಶ್ನೆಗೆ ಉತ್ತರಿಸಿದ. "ಮಂಗಳಿಗರು ವಿಜ್ಞಾನದಲ್ಲಿ ನಮಗಿಂತಲೂ ಮುಂದುವರಿದಿದಾರೆ. ನಾನು ಸಹ ಒಂದು ಸಲ ಆ ಲೋಕಕ್ಕೆ ಹೋಗಿ ಬಂದಿದೇನೆ. ಗುರು ಗ್ರಹಕ್ಕೂ ಮಂಗಳ ಲೋಕಕ್ಕೂ ಸಂಚಾರ ಸೌಕರ್ಯವಿದೆ. ಆದರೆ ಗುರು ನಮಗೆ ಬಹು ದೂರದಲ್ಲಿದಾನೆ. ಅಷ್ಟು ದೂರ ನಿಲ್ಲದೆ ನಮ್ಮ ವಿಮಾನಗಳು ಹಾರವು. ನೀನು ಬಹುಶಃ ಗುರು ಗ್ರಹದವನಿರಬೇಕು. ಆದುದರಿಂದ ನೀನು ಈ ಲೋಕದ ಅನುಭವವೇ ಇಲ್ಲದವನಂತೆ ಮಾತಾಡುತಿರುವೆ."

ನಾನೂ ಇದೇ ಈ ಪುಟ್ಟ ಗೋಳಕ್ಕೆ ಸೇರಿದಾತ, ಆದರೆ ಆತನಿಗಿಂತಲೂ ನಲವತ್ತು ಪೀಳಿಗೆ ಮೊದಲೇ ಜನಿಸಿದ್ದೆ, ಎಂದು ನಾನು ನುಡಿದರೆ ಅದನ್ನು

ಅವನು ಒಪ್ಪಲಾರ. ಆದುದರಿಂದ ಆತ ಹೇಳಿದ ಮಾತಿಗೆ " ಹೂಂ " ಎಂದು ತಲೆಯನ್ನು ಅಲುಗಿಸಿದೆ. ಪುನಃ ನಾನು ನುಡಿದೆ. " ನನ್ನ ಪ್ರಶ್ನೆಗೆ ನೀನು ಉತ್ತರ ಹೇಳಲಿಲ್ಲವಲ್ಲ ? "

" ಹೇಳುತ್ತೇನೆ. ಓದುಬರಹ ಕಲಿಯಲು ನಾವು ಯೋಗ್ಯರೋ ಅಲ್ಲವೋ ಎಂದು ಪರಿಶೋಧಿಸತಕ್ಕವರು ವಿಜ್ಞಾನಿಗಳು. ಅವರೇ ನಮ್ಮನ್ನು ಸಾಕಿ ಸಲಹಿದರೆಂಬುದನ್ನು ನೆನಪಿನಲ್ಲಿಡಬೇಕು. ಬಾಲಕರಿಗೆ ಹತ್ತು ಹನ್ನೆರಡು ವರುಷ ಪ್ರಾಯವಾಗಲು ವಿಜ್ಞಾನಿಗಳು ನಾನಾಬಗೆಯ ಯಂತ್ರಗಳಿಂದ, ಅವರ ಬುದ್ಧಿಶಕ್ತಿ ಮನಶ್ಶಕ್ತಿಗಳನ್ನು ಪರೀಕ್ಷಿಸುತಾರೆ. ಈ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದವರಿಗೆ ಮಾತ್ರ ಓದುಬರಹ ಕಲಿಸುತಾರೆ. ಬಾಲಕನ ಬುದ್ಧಿ ಅತಿ ತೀಕ್ಷ್ಣವಾದುದಾಗಿದ್ದರೆ, ಅವನಿಗೆ ವೈಜ್ಞಾನಿಕ ಶಿಕ್ಷಣ ದೊರೆಯುತದೆ. ಅವನನ್ನು ವಿಜ್ಞಾನಿಗಳು ತಮ್ಮ ಗುಂಪಿಗೆ ಸೇರಿಸಿಕೊಳ್ಳುತಾರೆ. ಮಧ್ಯಮ ತರಗತಿಯವರನ್ನು ಯಂತ್ರ ಚಾಲಕರನ್ನಾಗಿ, ಅಥವಾ ಸರಕಾರದ ಅಧಿಕಾರಿಗಳನ್ನಾಗಿ ಮಾಡುತಾರೆ. ನಾವು ಎಂದರೆ ಜನಸಾಮಾನ್ಯರು ಈ ಎರಡು ಗುಂಪಿಗೂ ಸೇರಿದವರಲ್ಲ. ಆದುದರಿಂದ ನಮಗೆ ಓದುಬರಹ ಕಲಿಯುವ ಹಕ್ಕೂ ಇಲ್ಲ. ಓದುಬರಹ ಕಲಿಯದುದರಿಂದ ನಮಗಾದ ತೊಂದರೆಯೇನು ? ವಾರಕ್ಕೆ ಎರಡು ದಿನ ಅಧಿಕಾರಿಗಳು ಹೇಳಿದ ಕೆಲಸ ಮಾಡುವುದಲ್ಲದೆ ಬೇರೆ ಯಾವ ಹೊಣೆಗಾರಿಕೆಯೂ ನಮ್ಮ ಹೆಗಲಮೇಲಿಲ್ಲ. ಚಿಂತೆಯಿಲ್ಲದೆ ನಾವು ಸುಖವಾಗಿ ಬದುಕುತ್ತೇವೆ; ಬಾಳುತ್ತೇವೆ. "

" ಬೌದ್ಧಿಕ ಮತ್ತು ಮನಶ್ಶಕ್ತಿಗಳು ಕಡಿಮೆಯಾದವರಿಗೆ ಯಾವ ಬಗೆಯ ಶಿಕ್ಷಣವೂ ಇಲ್ಲವೇ ? "

" ಶಿಕ್ಷಣವಿಲ್ಲದಿರುವುದೆಂದರೇನು ? ಪ್ರತಿಯೊಬ್ಬ ಮಾನವನಿಗೂ ಅವನವನ ಯೋಗ್ಯತಾನುಸಾರ ಶಿಕ್ಷಣ ದೊರಕಿಯೇ ದೊರಕುತದೆ. ವಿದ್ಯೆ ಗಳಿಸುವುದು ಪ್ರತಿಯೊಬ್ಬ ಮಾನವನ ಜನ್ಮಸಿದ್ಧವಾದ ಹಕ್ಕು "

" ಅಭ್ಯಾಸ ಅಧ್ಯಯನಗಳಿಲ್ಲದೆ ಮನುಷ್ಯನ ಬುದ್ಧಿ ಪರಿಪಕ್ವವಾಗುವುದೇ ? "

ನನ್ನ ಪ್ರಶ್ನೆ ಆ ಪಯಣಿಗನ ವಿಚಾರಶಕ್ತಿಯ ಅಳವನ್ನು ಮೀರಿದುದು. ಮಾರುಗೊಡುವುದು ಆತನಿಗೆ ಅಸಾಧ್ಯವೆನಿಸಿತು. ಆತ ಬೆರಳುಗಳಿಂದ ತಲೆ

ಕೆರೆದುಕೊಳ್ಳುತ್ತಾ ಹೇಳಿದ. “ ನಿನ್ನ ಮಾತಿಗೆ ಅವರು ಎಂದರೆ ವಿಜ್ಞಾನಿಗಳು ಉತ್ತರ ಕೊಡುವರು. ”

“ ನೀನು ಎಲ್ಲಿಗೆ ಹೊರಟೆ ? ” ಆತ ಪ್ರಶ್ನಿಸಿದ.

“ ನಿಮ್ಮ ಶಿಕ್ಷಣ ಕೇಂದ್ರ ನೋಡಬೇಕೆಂದು ನನಗೆ ಆಶೆಯಾಗಿದೆ. ಆದುದರಿಂದ ಆ ಕಡೆ ಹೊರಟಿದ್ದೇನೆ. ”

“ ಒಳ್ಳೇದು. ನಾನಾದರೂ ಆಕಡೆಯೇ ತೆರಳುತಿದ್ದೇನೆ. ನನ್ನ ಸಂಗಡ ಬಾ. ಎಲ್ಲ ಎಡೆಗಳನ್ನು ತೋರಿಸಿಕೊಡುವೆನು. ಆದರೆ ನೀನು ಬೇರೆ ಗ್ರಹದಿಂದ ಬಂದವನು. ಶಿಕ್ಷಣ ವಿಭಾಗದ ಮುಖ್ಯಾಧಿಕಾರಿ ನಿನಗೆ ಸಮ್ಮತಿಯನ್ನು ಕೊಡುವನೋ ಎಂಬುದು ಸಂದೇಹಾಸ್ಪದ. ”

“ ಏಕೆ ? ” ನಾನು ಕಣ್ಣುಗಳನ್ನಗಲಿಸಿದೆ.

“ ನೋಡಿ, ಮಂಗಳ ಗ್ರಹದವರು ವಿಜ್ಞಾನದಲ್ಲಿ ಬಹಳ ಮುಂದುವರಿದಿದ್ದಾರೆ. ಭೂಮಿಯ ಮೇಲೆ ತಮ್ಮದೊಂದು ವಸಾಹತು ಕಟ್ಟುವ ಯೋಚನೆ ಅವರಿಗಿದೆ. ಆದುದರಿಂದ ಇಲ್ಲಿಗೆ ಬಂದ ಮಂಗಳಿಗರಿಗೆ ನಮ್ಮ ವಿದ್ಯಾಲಯಗಳನ್ನು ತೋರಿಸುವುದಿಲ್ಲ. ನೀನು ಗುರು ಗ್ರಹದಿಂದ ಬಂದವನಾದುದರಿಂದ, ಒಂದು ವೇಳೆ ಅವರು ಸಮ್ಮತಿಯನ್ನು ಕೊಡಬಹುದು. ”

ದೋಣಿ ಈಗ ಶಿಕ್ಷಣ ಕೇಂದ್ರವಿದ್ದೆಡೆಗೆ ಬಂದು ನಿಂತಿತು. ಪಯಣಿಗರಲ್ಲಿ ಹಲವರು ದೋಣಿಯಿಂದ ಇಳಿದರು. ನನ್ನ ಸಂಗಡ ಮಾತಾಡುತಿದ್ದವನು ಆಸನದಿಂದ ಎದ್ದ. ನಾನೂ, ಮೀನಾ ಇಬ್ಬರೂ ಅವನೊಡನೆ ದೋಣಿಯಿಂದ ಇಳಿದೆವು.

“ ನಿನ್ನ ಹೆಸರೇನು ? ” ಆತನ ಪರಿಚಯವನ್ನು ಸಂಪಾದಿಸಲು ನಾನು ಹವಣಿಸಿದೆ.

“ ನಾಗರ. ” ಎಂದು ಆತ ಮಾರ್ನುಡಿದ.

“ ಶಿಕ್ಷಣಾಲಯದ ಹಾದಿಯನ್ನು ಹಿಡಿದು ನಾಗರ ಮುನ್ನಡೆದ. ನಾವಿಬ್ಬರು ಆತನನ್ನು ಹಿಂಬಾಲಿಸಿದೆವು. ಮಾತುಕತೆಗಳೂ ನಡಿಗೆಯೊಡನೆ ಮುಂದುವರಿದುವು. “ ನೀನಾವ ಕಸುಬು ಮಾಡುತಿರುವೆ ? ” ಎಂದು ನಾನು ಕೇಳಿದೆ.

“ ಕಸುಬು ! ” ನನ್ನ ನುಡಿಯನ್ನು ಅರ್ಥ ಮಾಡಿಕೊಳ್ಳದೆ ನಾಗರ ಮುಖವನ್ನೇ ನೋಡಿದ.

" ಹೌದು. ವೃತ್ತಿ. ಉಪಜೀವನ ನಡೆಸಲು ಮನುಷ್ಯ ಯಾವುದಾದರೂ ಒಂದು ಬಗೆಯ ಉದ್ಯೋಗ ಮಾಡಬೇಕಲ್ಲ. "

" ಅಯ್ಯೋ ಪಾಪ. ನಿನಗೆ ಈ ಲೋಕದ ಪರಿಚಯ ಎಳ್ಳಷ್ಟೂ ಇಲ್ಲ. ನಿನ್ನ ಮಾತುಕತೆ ಕೇಳುವಾಗ, ನೀನು ಬಹಳ ಹಿಂದಿನವನೆಂದು ಕಾಣುತ್ತೀಯೆ. ಹತ್ತು ಶತಮಾನಗಳ ಹಿಂದೆ ಜನ ಗಾಣದೆತ್ತಿನಂತೆ ದುಡಿಯುತಿದ್ದರು. ಮನುಷ್ಯನ ಈ ಸಂಕಟವನ್ನು ವಿಜ್ಞಾನಿಗಳು ತಪ್ಪಿಸಿದಾರೆ. ನಾವು ಪ್ರತಿ ನಿತ್ಯ ದುಡಿಯಬೇಕಾಗಿಲ್ಲ. ವಾರಕ್ಕೆ ಎರಡು ದಿನ ಬೇನಾಯ ಕ್ಷೇತ್ರಕ್ಕೋ ಯಂತ್ರಾಲಯಗಳಿಗೋ ಹೋಗಿ ನಾಲ್ಕು ತಾಸು ದುಡಿದರೆ ಸಾಕು. "

" ಕೆಲಸವಿಲ್ಲದ ದಿನಗಳಲ್ಲಿ ನಿನಗೆ ಬೇಸರವಾಗುವುದಿಲ್ಲವೆ ? "

" ಬೇಸರವೇಕೆ ? ಸಮಯ ಕಳೆಯಲು ಚಲಚಿತ್ರ ಮಂದಿರಗಳಿವೆ. ವಿಮಾನದಲ್ಲಿ ಹತ್ತಿಕುಳಿತು ಭೂಮಿಯ ಯಾವ ಭಾಗಕ್ಕೆ ಬೇಕಾದರೂ ತೆರಳಬಹುದು. ಮಂಗಳ ಗ್ರಹಕ್ಕೂ ಒಮ್ಮೆ ಹೋಗಿಬರಬಹುದು. ಉದ್ಯಾನದಲ್ಲಿ ವಿಹರಿಸಬಹುದು. ಹೊತ್ತುಹೊತ್ತಿಗೆ ಸರಿಯಾಗಿ ಆಹಾರ ದೊರೆಯುತಿದೆ. ಇನ್ನು ನಮಗೆ ಚಿಂತೆಯೇಕೆ ? ಬೇಸರವೇಕೆ ? "

ಸಾಗರ ಹೇಳಿದ ಮಾತುಗಳನ್ನು ಕೇಳಿ ನನಗೆ ಆಶ್ಚರ್ಯವಾಯಿತು. ದುಡಿಯುವುದು ಮನುಷ್ಯ ಪ್ರಕೃತಿಯಿಂದ ಪಡೆದ ಅಮೂಲ್ಯವಾದ ಅನುಗ್ರಹ. ತನ್ನ ಬುದ್ಧಿ ದೇಹಗಳೆರಡನ್ನು ನಮೆದುದರಿಂದಲೇ ಮನುಷ್ಯ ಶಿಲಾಯುಗವನ್ನು ಬಿಟ್ಟು ಆಧುನಿಕ ಯಾಂತ್ರಿಕ ಯುಗಕ್ಕೆ ಐತಂದಿದ್ದ. ಇಳೆಯನ್ನು ಬಿಡುಗಣ್ಣರ ನಾಡಾಗಿ ರೂಪಾಂತರಗೊಳಿಸಿದುದು ದುಡಿಮೆಯ ಹಿರಿಯ ಸಾಹಸವೇ ಸರಿ. ಮುಂದಿನ ಪೀಳಿಗೆ ದುಡಿಮೆಯನ್ನು ಕಡೆಗಣಿಸಿ, ಯಂತ್ರಗಳ ತೊತ್ತಾಗಿ ಬಾಳುವುದಾದರೆ ಜೀವನ ಪುರೋಗತಿಯನ್ನು ಹೊಂದುವುದೆಂತು ? ಉದ್ಯೋಗವಿಲ್ಲದೆ ಜೀವಿಸುತಿರುವ ಆ ಜನತೆಯ ಇರವು ಹೂವಿನಿಂದ ಹೂವಿಗೆ ಹಾರಿ ಮಕರಂದವನ್ನು ಸೂರೆಗೊಳ್ಳುತಲಿಹ ತುಂಬಿವಿಂಡನ್ನು ನನ್ನ ನೆನಪಿಗೆ ತಂದಿತು. ಇದು ಮಾನವ ಸಮಾಜದ ಅವನತಿಯ ಸೂಚನೆಯೆಂದು ನಾನೆಣಿಸಿದೆ. ಮುಂದೆ ಹಲವಾರು ಶತಮಾನಗಳಲ್ಲಿ ನೆಲದ ಮೇಲೆ ಮಾನವನ ಹೆಸರೇ ಇಲ್ಲದಾಗಬಹುದೆಂದು ನಾನು ಶಂಕಿಸಿದೆ.

ಈ ಚಿಂತೆಗಳೊಡನೆ ನಾನು ಸಾಗರನನ್ನು ಹಿಂಬಾಲಿಸಿದೆ. ಮೀನಾ ನನ್ನ ಬೆನ್ನ ಹಿಂದೆಯೇ ಇದ್ದಳು. " ಇಗೋ ಇದೇ ನಮ್ಮ ವಿದ್ಯಾಲಯ "

ಎಂಬ ಸಾಗರನ ಮಾತು ಆಲೋಚನೆಯಲ್ಲಿ ಮುಳುಗಿದ್ದ ನನ್ನನ್ನು ಎಚ್ಚರಿಸಿತು. ನಾನು ಕಣ್ಣುಗಳನ್ನಗಲಿಸಿ ನೋಡಿದೆ. ಹತ್ತು ಮಾರುಗಳ ಅಂತರದಲ್ಲಿ ಐದು ಅಂತಸ್ತುಗಳುಳ್ಳ ಒಂದು ಕಟ್ಟಡದ ಹೆಬ್ಬಾಗಿಲಿನಲ್ಲಿ ಪಹರೆಯವನೊಬ್ಬ ನಿಂತಿದ್ದ. ಆತನಾದರೂ ಯಾಂತ್ರಿಕ ಮನುಷ್ಯನೇ. ಸಾಗರ ಅವನ ಬಳಿಗೆ ಹೋಗಿ ನಿಂತೊಡನೆ 'ಗಣಗಣ' ಎಂದು ಗಂಟೆಯೊಂದು ಬಾರಿಸಿತು. ಗಂಟೆಯ ನಾದ ಕೇಳಿ ಕಟ್ಟಡದೊಳಗಿನಿಂದ ಸೇವಕನೊಬ್ಬ ಹೊರಬಂದ. "ಏನಾಗ ಬೇಕು?" ಎಂಬ ಪ್ರಶ್ನೆ ಆತನ ಕೊರಳಿಂದ ಹೊರಟಿತು.

"ವಿದ್ಯಾಲಯವನ್ನು ನೋಡಬೇಕೆಂದು ನಾವು ಬಂದಿದೇವೆ. ಶಿಕ್ಷಣ ವಿಭಾಗದ ಮುಖ್ಯಾಧಿಕಾರಿಯ ದರ್ಶನವಾಗಬೇಕು."

"ನಿನ್ನ ಜತೆಯಲ್ಲಿರುವವನು ಯಾರು?" ನನ್ನ ಕಡೆಗೆ ಬೆರಳು ತೋರಿಸುತ್ತಾ ನೌಕರ ಉಸುರಿದ. "ಈತ ಈ ಲೋಕದವನ ಹಾಗಿಲ್ಲ."

"ಗುರು ಗ್ರಹದಿಂದ ಮೊನ್ನೆ ಇಲ್ಲಿಗೆ ಬಂದ. ನಮ್ಮ ಗೋಳದ ಶಿಕ್ಷಣ ಕ್ರಮವನ್ನು ಅರಿಯಬೇಕೆಂದು ಇಲ್ಲಿಗೆ ಬಂದಿದಾನೆ."

"ಕುಳಿತಿರಿ. ಮುಖ್ಯಾಧಿಕಾರಿಗೆ ತಿಳಿಸಿ ಬರುವೆನು."

ಕಟ್ಟಡದ ಜಗಲಿಯಮೇಲೆ ಕುಳ್ಳಿರಲು ಎಡೆ ತೋರಿಸಿ ಆತ ಹೊರಟು ಹೋದ. ಅಲ್ಲಿ ತಂತಿಗಳನ್ನು ಹೆಣೆದು ಮಾಡಿದ ಮೆತ್ತಗಿನ ಬೆಂಚು ಇದ್ದಿತು. ಒರಗಿಕೊಳ್ಳಲು ತಕ್ಕ ಸೌಕರ್ಯವಿದ್ದಿತು. ನಾವು ಮೂವರೂ ಸಾಲಾಗಿ ಕುಳಿತೆವು. ನಮ್ಮೂರ ವಿದ್ಯಾಲಯಗಳಲ್ಲಿರುವಂತೆ ಇಲ್ಲಿ ಹೂದೋಟವಿರಲಿಲ್ಲ. ಹಚ್ಚಗೆ ಹಸುರಾದ ಹುಲ್ಲಲ್ಲದೆ ಬೇರಿನ್ನಾವ ಸಸ್ಯವೂ ಆ ಆವರಣದಲ್ಲಿ ನೋಡಸಿಗದು. ಬಹು ದೂರದಲ್ಲಿ ಹತ್ತೆಂಟು ಸಣ್ಣ ಮರಗಳು ಕಾಣುತಿದ್ದುವು. ಸಸ್ಯ ಸಂಪತ್ತು ವಿರಳವಾಗಿರುವುದನ್ನು ಕಂಡು ಮನುಷ್ಯರು ಪ್ರಕೃತಿ ಸೌಂದರ್ಯವನ್ನು ಆರಾಧಿಸುವ ಹವ್ಯಾಸವನ್ನು ಬಿಟ್ಟಿರಬಹುದೇ ಎಂದು ನಾನು ಸಂದೇಹಗೊಂಡೆ.

"ಹೂದೋಟಗಳು ನಿಮ್ಮೂರಲ್ಲಿ ಕಾಣುವುದಿಲ್ಲವಲ್ಲ!" ಎಂದು ಜತೆಗಾರನನ್ನು ಬೆಸಗೊಂಡೆ.

"ಹೂದೋಟ." ಎಂದು ಸಾಗರ ವಿಸ್ಮಯದಿಂದ ಹೇಳಿದ. ನನ್ನ ನುಡಿಗಳು ಆತನಿಗೆ ಅರ್ಥವೇ ಆಗಲಿಲ್ಲ.

ವೈಯಕ್ತಿಕವಾಗಿ ಮನೆಯಮುಂದೆ ಹೂದೋಟಗಳನ್ನು ನಿರ್ಮಿಸುವ ಪರಂಪರೆಯೇ ಆ ಕಾಲದಲ್ಲಿ ತಪ್ಪಿಹೋಗಿದ್ದಿತು. ಆದುದರಿಂದಲೇ, ನನ್ನ ನುಡಿ

ಮೊದಲು ಸಾಗರನಿಗೆ ಅರ್ಥವಾಗಲಿಲ್ಲ. ನಾನು ಹೂದೋಟವಿರುವ ಬಗೆಯನ್ನು ಅವನಿಗೆ ವಿವರಿಸಿ ಹೇಳಿದೆ. ಆಗ ಅವನಿಗೆ ಹೂದೋಟವೆಂದರೇನೆಂದು ಅರಿವಾಯಿತು. ಆತ ನಗುತ್ತಾ ಹೇಳಿದ. "ಪ್ರತಿಯೊಂದು ಮನೆಯ ಮುಂದೆ, ಕಟ್ಟಡದ ಮುಂದೆ ಉದ್ಯಾನಗಳನ್ನು ನಾವು ಮಾಡುವುದಿಲ್ಲ. ನಗರದಿಂದ ಐದು ಮೈಲು ದೂರದಲ್ಲಿ ಮೂರು ಬೇರೆ ಬೇರೆ ಉದ್ಯಾನಗಳಿವೆ. ಶಿಶುರಕ್ಷಣಾಲಯದಲ್ಲಿ ಒಂದು ಕಿರಿಯ ಉದ್ಯಾನವಿದೆ. ಪ್ರತಿಯೊಂದು ಕಟ್ಟಡದ ಸುತ್ತಲೂ ಉದ್ಯಾನಗಳನ್ನು ನಿರ್ಮಿಸುವುದು ಅಸಾಧ್ಯ."

"ಉದ್ಯಾನದಲ್ಲಿ ವಿಹರಿಸಬೇಕಾದರೆ, ಅಷ್ಟು ದೂರ ಹೋಗಬೇಕಲ್ಲ?"

"ನಮಗೇನು ಬೇರೆ ಕೆಲಸ! ಬೇಸರವಾದಾಗ, ಆ ಕಡೆಗಿರುವ ಕಾಲುವೆಯಲ್ಲಿ ಸಂಚರಿಸುವ ದೋಣಿಯೊಂದನ್ನು ಹತ್ತಿದರಾಯಿತು. ಅಲ್ಲಿ ಹೋಗಿ ಕೊಳಗಳಲ್ಲಿ ಮೀಯಬಹುದು. ಮನಬಂದಂತೆ ನಲಿಯಬಹುದು. ಆದರೆ ಹಗಲು ಹೊತ್ತು ನಾವು ಅಲ್ಲಿಗೆ ತೆರಳುವುದಿಲ್ಲ. ಇರುಳು ಹೋಗುವೆವು. ಬಣ್ಣಬಣ್ಣದ ದೀಪಗಳು ಬೆಳಗುತ್ತಲಿರುತ್ತವೆ. ಕಾರಂಜಿಗಳು ಐನೂರು ಅಡಿ ಎತ್ತರಕ್ಕೆ ಚಿಮ್ಮುತ್ತಲಿರುತ್ತವೆ. ಆ ನೋಟವನ್ನು ನಾನು ಬಣ್ಣಿಸಲಾರೆ. ಇಂದು ನನ್ನೊಡನೆ ಬಾ; ಆ ಚೆಲುವನ್ನೊಮ್ಮೆ ಕಂಡು ನಿನ್ನ ಕಣ್ಣುಗಳನ್ನು ತಣಿಸಿಕೋ."

ತುಂಬಾ ಉತ್ಸಾಹದ ದನಿಯಲ್ಲಿ ಸಾಗರ ಉದ್ಯಾನದ ಸೊಬಗನ್ನು ಬಣ್ಣಿಸಲು ಹೊರಟ. ಆತನ ಮಾತು ಮುಗಿಯುವ ಮುನ್ನ ಒಳಗೆ ಹೋಗಿದ್ದ ನೌಕರ ಮರಳಿ ಬಂದ. ತನ್ನ ಸಂಗಡ ಬರಲು ಆತ ನಮ್ಮೊಡನೆ ಹೇಳಿದ. ನಾವು ಕುಳಿತಲ್ಲಿಂದ ಎದ್ದೆವು; ಮಾತಿಲ್ಲದೆ ಅವನನ್ನು ಹಿಂಬಾಲಿಸಿದೆವು.

ಶಿಕ್ಷಣ ವಿಭಾಗದ ಮುಖ್ಯಾಧಿಕಾರಿಯ ಕೋಣೆಗೆ ಬಂದೆವು. ಸಾಗರ ತನ್ನ ಕೈಯನ್ನು ಅರ್ಧ ಎತ್ತಿ ಅಂದಿನ ಸಮಾಜದ ರೂಢಿಯಂತೆ ಅಧಿಕಾರಿಗೆ ನಮಸ್ಕರಿಸಿದ. ನಾನಾದರೂ ಸಾಗರನ ಪಂಕ್ತಿಯನ್ನೇ ಅನುಸರಿಸಿದೆ. ದೊಡ್ಡ ಹೊತ್ತಿಗೆಗಳನ್ನು ಇರಿಸಿದ ಮೇಜದಲ್ಲಿ ಕಾಗದವೊಂದರ ಮೇಲೆ ಬರೆಯುತಲಿದ್ದ ಅಧಿಕಾರಿ ತನ್ನ ಕಣ್ಣುಗಳನ್ನು ಹಾಳೆಯಿಂದ ಮೇಲಕ್ಕೆತ್ತಿದ. ಸಾಗರನ ಪರಿಚಯ ಆತನಿಗೆ ಚೆನ್ನಾಗಿ ಇತ್ತು. ಅವನು ಕಾಗದವನ್ನು ಒಂದು ಬದಿಗೆ ಸರಿಸಿ "ಏನು ಸಾಗರ, ಈ ಕಡೆ ಬಂದೆ?" ಎಂದು ಪ್ರಶ್ನಿಸಿದ.

"ಹೇಗಾದರೂ ಹೊತ್ತು ಕಳೆಯಬೇಕಲ್ಲ. ನಿಮ್ಮ ವಿದ್ಯಾಲಯವನ್ನು ನೋಡಿ ಹೋಗೋಣವೆಂದು ಬಂದೆ,"

" ನಿನಗೆ ಹೊತ್ತು ಕಳೆವುದೇ ಒಂದು ಸಮಸ್ಯೆಯಾಗಿದೆ. ಹತ್ತು ಶತಮಾನಗಳ ಹಿಂದಿನ ಸ್ಥಿತಿಯನ್ನು ಆಲೋಚಿಸು. ಆಗಿನ ಮನುಷ್ಯನಿಗೆ ಬಿಡುವೆಂಬುದೇ ಇರುತಿರಲಿಲ್ಲ. ಹಗಲು ರಾತ್ರಿಯೆನ್ನದೆ ಹಿಡಿ ಕೂಳಿಗೋಸುಗ ಅವನು ದುಡಿಯಬೇಕಾಗಿದ್ದಿತು. ನಾವು ವಿಜ್ಞಾನಿಗಳು ಮನುಷ್ಯನ ಆ ಬಗೆಯ ಸಂಕಟಗಳನ್ನೆಲ್ಲಾ ಪರಿಹರಿಸಿದ್ದೇವೆ. ಮಾನವನಿಗೆ ಉಚಿತವಾಗಿ ಆಹಾರ ವಸ್ತ್ರಗಳನ್ನು ಒದಗಿಸಿದೇವೆ; ಹೊತ್ತು ಕಳೆಯಲು ಉದ್ಯಾನಗಳನ್ನು ನಿರ್ಮಿಸಿದೇವೆ. ಚಲಚಿತ್ರ ಮಂದಿರಗಳನ್ನು ಕಟ್ಟಿದೇವೆ; ಪ್ರಯಾಣ ಸೌಕರ್ಯಗಳನ್ನು ವಿಪುಲಗೊಳಿಸಿದ್ದೇವೆ. "

ಹೀಗೆ ಆ ಅಧಿಕಾರಿ ವೈಜ್ಞಾನಿಕ ಯುಗದ ಹಿರಿಮೆಯನ್ನು ಕುರಿತು ಒಂದು ಉಪನ್ಯಾಸವನ್ನೇ ಕೊಡಲು ಆರಂಭಿಸಿದ್ದ. ಅನಿತರಲ್ಲಿ ಸಾಗರನ ಬೆನ್ನ ಹಿಂದೆ ಇದ್ದ ನನ್ನ ಕಡೆಗೆ ಆತನ ನೋಟ ಹೊರಳಿತು. " ಈತನಾರು ? ಈ ಗೋಳದಲ್ಲಿ ವಾಸಿಸುವ ಮನುಷ್ಯನಂತೆ ತೋರುವುದಿಲ್ಲ. " ಎಂದ.

" ಈ ಲೋಕದವನೇ ಅಲ್ಲ. ಬೇರೊಂದು ಗ್ರಹದಿಂದ ಐತಂದಿದಾನೆ. " ಎಂದು ಮಾರ್ನುಡಿದ ಸಾಗರ.

" ಮಂಗಳ ಗ್ರಹದವನೆ, ಅಲ್ಲ. ಈ ಮೈಕಟ್ಟು ಅಲ್ಲಿನವರಿಗಿಲ್ಲ. ಅವರ ಉಡಿಗೆತೊಡಿಗೆಗಳೇ ಬೇರೆ ರೀತಿಯವು. ನಾನು ಮಂಗಳ ಗ್ರಹದಲ್ಲಿದ್ದಾಗ, ಅಲ್ಲಿನ ಜನರ ಜೀವನಕ್ರಮ, ಭಾಷೆ, ವಿಜ್ಞಾನ ಮೊದಲಾದುವುಗಳನ್ನು ಸ್ವಲ್ಪ ಅಭ್ಯಾಸ ಮಾಡಿದ್ದೆ. "

" ಈತ ಗುರು ಗ್ರಹದವನಂತೆ. ಈ ಗೋಳದ ಜನರ ಜೀವನ, ಶಿಕ್ಷಣ ಸಂಸ್ಕಾರಗಳನ್ನು ಅರಿಯಬೇಕಂತೆ. " ನನಗೋಸುಗ ಸಾಗರನೇ ಮಾತಾಡಿದ. " ಆ ಸಲುವಾಗಿ ಇಲ್ಲಿಗೆ ಬಂದಿದಾನೆ. "

" ಸರಿ, ಒಳ್ಳೆಯದು ಕುಳ್ಳಿರಿ. " ಅಧಿಕಾರಿ ಕೋಣೆಯಲ್ಲಿದ್ದ ಉದ್ದನ್ನ ಬೆಂಚೊಂದನ್ನು ತೋರಿಸಿದ. ಆತನ ಅಪೇಕ್ಷೆಯಂತೆ ನಾವು ಕುಳಿತುಕೊಂಡೆವು.

" ಆದರೆ ಗುರುಗ್ರಹ ಇಲ್ಲಿಗೆ ಬಹುದೂರ. ಅಲ್ಲಿ ಜನರಿದಾರೆಂಬುದನ್ನು ದೂರ ದರ್ಶಕಗಳಿಂದ ನಾವು ಅರಿತಿದೇವೆ. ಆದರೆ ಅಲ್ಲಿಗೆ ಹೋಗಲು ನಮಗೆ ಇನ್ನೂ ಸಾಧ್ಯವಾಗಿಲ್ಲ. ಗುರು ಗ್ರಹದ ಜನರು ಒಂದೆರಡು ಸಲ ಮಂಗಳ

ಲೋಕಕ್ಕೆ ಬಂದಿದ್ದರಂತೆ. ಈತ ನಿಜವಾಗಿಯೂ ಗುರು ಗ್ರಹದಿಂದ ಬಂದಿರುವುದಾದರೆ ಅಲ್ಲಿನ ಜನರು ನಿಜವಾಗಿಯೂ ಸಾಹಸಿಗರೇ ಸರಿ. ”

ಈಗ ನಾನು ಮಾತಾಡಬೇಕಾಗಿದ್ದ ಮನುಷ್ಯ ಇತರರಿಗಿಂತಲೂ ವ್ಯತ್ಯಸ್ಥನಾಗಿದ್ದ. ಇತರರು ಬಾಳುವೆಯಲ್ಲಿ ಎದುರಿಸಲು ಯಾವ ಸಮಸ್ಯೆಯೂ ಇಲ್ಲದೆ, ನಲಿವು ವಿಹಾರಗಳಿಗೋಸುಗ ಹಾರಾಡುತ್ತಿದ್ದ ಬಂಡುಣಿಗಳಾಗಿದ್ದರೆ, ಈತ ಆ ತುಂಬಿವಿಂಡಿಗೆ ಬಾಳಲು ಅಗತ್ಯವೆನಿಸಿದ ಮಕರಂದವನ್ನು ಒದಗಿಸುತ್ತಾ ಅವರ ಬದುಕು ಈ ಪರಿಯಲ್ಲಿರಬೇಕೆಂದು ವಿಧಾಯಕ ಮಾಡುತ್ತಿದ್ದ ನವ ಬ್ರಹ್ಮರಲ್ಲಿ ಒಬ್ಬನಾಗಿದ್ದ. ಅವನ ಬುದ್ಧಿ ಚೂರಿಯಲಗಿನಂತೆ ಹರಿತವಾದುದು. ಬುದ್ಧಿಬಲದಲ್ಲಿ ಆತ ನನ್ನ ಮುಂದೆ ನಿಂತಿದ್ದ ಎತ್ತರದ ಗುಡ್ಡವಾಗಿದ್ದ. ಇತರರೊಡನೆ ಗುರು ಗ್ರಹದಿಂದ ಐತಂದವನೆಂದು ಹೇಳಿ ಬಾಯಿ ಹಾರಿಸಬಹುದಿತ್ತು. ಆದರೆ ಈತನೊಡನೆ! ಅರಿವು, ಸಂಶೋಧನೆ, ಯಂತ್ರ, ಇವುಗಳ ಮೂಲಕ ಸೌರವ್ಯೂಹವನ್ನೇ ತನ್ನ ಅಂಕಿತಕ್ಕೆತರಲು ಹವಣಿಸುತ್ತಿದ್ದ ವಿಜ್ಞಾನಿಯೊಡನೆ !!

“ ನಮ್ಮ ಭಾಷೆಯನ್ನು ಈತ ಬಲ್ಲನೇ ? ”

“ ನಮ್ಮ ನುಡಿಯನ್ನು ಅರ್ಧದಷ್ಟು ಮಾತಾಡಬಲ್ಲ; ನಾವಾಡಿದುದನ್ನು ತಿಳಿದುಕೊಳ್ಳಬಲ್ಲ ! ”

ಅಧಿಕಾರಿಯ ಹಣೆಯ ಮೇಲೆ ಆಲೋಚನೆಯ ಗೆರೆಗಳು ಮೂಡಿದುವು. ತುಸು ಸಮಯದವನಕ ಆತ ನನ್ನನ್ನೇ ನಿಟ್ಟಿಸುತ್ತಾ ಸುಮ್ಮನಿದ್ದ; ಆ ಮೇಲೆ ನಿಧಾನವಾಗಿ ಹೇಳಿದ. “ ನನ್ನ ನುಡಿಯನ್ನು ನೀನು ಗ್ರಹಿಸುವೆಯೋ ಇಲ್ಲವೋ ? ಆದರೆ ಸಾಗರ, ಈತ ಗುರು ಗ್ರಹದಿಂದ ಬಂದವನಲ್ಲ. ಮನುಷ್ಯ ಇತರ ಗ್ರಹಗಳೊಡನೆ ಸಂಪರ್ಕ ಬೆಳೆದು, ಮೂರುನಾಲ್ಕು ಶತಮಾನಗಳು ಆದುವಷ್ಟೆ. ಆದುದರಿಂದ ಗುರು ಗ್ರಹದವರ ಭಾಷೆ ಮತ್ತು ನಮ್ಮ ಭಾಷೆ ಒಂದೇ ಆಗಿರಲು ಶಕ್ಯವೇ ಇಲ್ಲ. ಈತನ ಉಡಿಗೆತೊಡಿಗೆಗಳ ಬಗೆಯನ್ನು ನೋಡಿದರೆ ಹತ್ತು ಶತಮಾನಗಳ ಹಿಂದಿನವನೆಂದು ತೋರುತ್ತದೆ. ”

“ ಹತ್ತು ಶತಮಾನ ಕಾಲ ಮನುಷ್ಯ ಜೀವಿಸಿರಬಲ್ಲನೇ ? ” ಈತನಕ ತುಟಿ ಬಿಚ್ಚದೆ ಕುಳಿತಿದ್ದ ನಾನು ನಡುವೆ ಬಾಯಿ ಹಾಕಿದೆ.

“ ಏಕೆ ಜೀವಿಸಬಾರದು ! ” ಅಧಿಕಾರಿ ಮಾರ್ನುಡಿದ. ಅವನ ಮಾತುಗಳಲ್ಲಿ ಆತ್ಮವಿಶ್ವಾಸ ಸ್ಫುರಿಸುತ್ತಿದ್ದಿತು. “ಆದರೆ ನಾವು ವಿಜ್ಞಾನಿಗಳು ಆ ಹಾದಿಯಲ್ಲಿ ಪ್ರಯತ್ನಿಸಲಿಲ್ಲ. ಆದರೆ ಸಾವಿರ ವರುಷ ಆಯುಷ್ಯ ಕೊಡುವಂತಹ

ತ್ರಾಣಿಕವೊಂದನ್ನು ತಯಾರಿಸುವುದು ಪ್ರಯಾಸವಾದುದೇನೂ ಅಲ್ಲ. ಹೆಚ್ಚಿನ ಔಷಧಗಳನ್ನು ಉಪಯೋಗಿಸದೆಯೇ, ವೈಜ್ಞಾನಿಕ ಕ್ರಮದ ಆಹಾರ ಮತ್ತು ಜೀವನ ಕ್ರಮಗಳನ್ನು ಅನುಸರಿಸಿದ ಮನುಷ್ಯ ನೂರೈವತ್ತು ವರುಷಗಳತನಕ ಬದುಕುತಾನೆ. ನೋಡು, ನನ್ನ ಪ್ರಾಯ ನೂರಿಪ್ಪತ್ತು ವರುಷ."

ಈ ನುಡಿಗೇಳಿ ಸೋಜಿಗ ಹೊಂದಿದ ನಾನು ಅಧಿಕಾರಿಯ ಮೊಗವನ್ನೇ ದಿಟ್ಟಿಸಿ ನೋಡಿದೆ. ಅವನ ಮೊಗದ ಮೇಲೆ ಮುಪ್ಪಿನ ಯಾವ ಸುಳಿವೂ ಕಂಡುಬರಲಿಲ್ಲ. ಇತರರಂತೆ ಆತನೂ ಕುಳ್ಳನೇ. ಆದರೆ ಅಂಗಾಂಗಗಳು ದೃಢವಾಗಿದ್ದುವು. ನೋಡುವಾಗ ಹರೆಯ ನಲವತ್ತು ಆದವನಂತೆ ಕಾಣುತಿದ್ದ. ಏನಿಲ್ಲೆಂದರೂ ಇನ್ನೂ ಇಪ್ಪತ್ತು ಮೂವತ್ತು ವರುಷಗಳತನಕ ಆತ ಬಾಳಬಲ್ಲ.

"ಮುಪ್ಪನ್ನೂ ರೋಗವನ್ನೂ ನೀವು ಹೊಡೆದಟ್ಟಿದ ಹಾಗಿದೆ."

"ಹೂಂ, ನಮ್ಮ ಸಮಾಜದಲ್ಲಿ ಮುದುಕರಿಲ್ಲ" ಅಧಿಕಾರಿಯ ತುಟಿಗಳ ಮೇಲೆ ಎಳೆ ನಗೆ ಮೂಡಿತು.

"ಹಾಗಾದರೆ ಪ್ರಾಯ ಮೀರಿ ನಿರ್ಬಲರಾದವರು ನಿಮ್ಮ ಜನಾಂಗ ದಲ್ಲಿಯೇ ಇಲ್ಲವೇ ?"

"ಇಲ್ಲ. ನಾವು ಒಬ್ಬ ಮಾನವನ ಜೀವಮಾನ ಇಷ್ಟೆಂದು ಖಚಿತ ಪಡಿಸಿದ್ದೇವೆ. ಅನಂತರ ಬದುಕಲು ಅವನಿಗೆ ಹಕ್ಕಿಲ್ಲ. ಅವನ ಜೀವನವನ್ನು ನಮ್ಮ ಸಮಾಜ ಕೊನೆಗಾಣಿಸುವುದು. ಈಗ ನೂರೈವತ್ತು ವರುಷಗಳತನಕ ಬದುಕಲು ಪ್ರತಿಯೊಬ್ಬನಿಗೂ ಸ್ವಾತಂತ್ರ್ಯವಿದೆ. ಆಡಳಿತಗಾರರು, ವಿಜ್ಞಾನಿ ಗಳು, ಯಂತ್ರ ಚಾಲಕರು ಮೊದಲಾದ ತಜ್ಞರು ಇನ್ನೂರು ವರುಷಗಳತನಕ ಬಾಳಬಹುದು. ಅನಂತರ ಅವನ ಬದುಕನ್ನು ವಿದ್ಯುತ್ತಿನಿಂದ ಕೊನೆಗಾಣಿ ಸುವವು."

"ಹೀಗೆ ವೃದ್ಧರನ್ನು ಕೊಲ್ಲುವುದು ರಾಕ್ಷಸತನವೇ ಸರಿ." ನಾನೆಂದೆ.

"ನಿನ್ನ ವಿಚಾರ ನಾಲ್ಕಾರು ಶತಮಾನಗಳ ಹಿಂದಿನದು." ಅಧಿಕಾರಿ ಗಹಗಹಿಸಿ ನಕ್ಕ. "ಈ ಪ್ರಪಂಚದಲ್ಲಿ ಎಂಟುನೂರು ಕೋಟಿಗಿಂತಲೂ ಹೆಚ್ಚು ಜನರಿದ್ದಾರೆ. ಇನ್ನು ಒಂದೆರಡು ಶತಮಾನಗಳಲ್ಲಿ ಜನಸಂಖ್ಯೆ ಸಾವಿರ ಕೋಟಿ ಗೇರುವುದು. ಅನಂತರ ವಾಸಿಸಲು ಪ್ರಪಂಚದಲ್ಲಿ ಸ್ಥಳವೆಲ್ಲಿದೆ? ಬೇರೆ ಗ್ರಹ ಗಳನ್ನು ವಶಪಡಿಸಿಕೊಳ್ಳೋಣವೆಂದರೆ ಚಂದ್ರ ನಿರ್ಜೀವ ಗ್ರಹ; ಉಪಯೋಗ

ಶೂನ್ಯ. ಮಂಗಳಿಗರು ಸಮಗಿಂತಲೂ ಬಲಿಷ್ಠರು. ಅಲ್ಲಿಯ ಜನಸಂಖ್ಯೆ ಯಾದರೂ ಮಿತಿಮೀರಿದೆ. ಇನ್ನೊಂದೆರಡು ಶತಮಾನಗಳಲ್ಲಿ ಮಂಗಳಿಗರೇ ನಮ್ಮ ಮೇಲೆ ಧಾಳಿ ನಡೆಸುವರೋ ಎಂಬ ಭಯವಿದೆ. ಆದುದರಿಂದ ಜನಸಂಖ್ಯೆಯನ್ನು ನಿಯಂತ್ರಿಸಲು ನಾವು ಕೈಲಾದಷ್ಟು ಪ್ರಯತ್ನಿಸುತಿದೇವೆ. ಒಂದೋ ಜನನ ಸಂಖ್ಯೆಯನ್ನು ತಡೆಯಬೇಕು; ಇಲ್ಲದಿದ್ದರೆ ವಯಸ್ಸಾದವರು ಹೊಸಬರಿಗೆ ಎಡೆಮಾಡಿ ಕೊಡಬೇಕು. ಜನನವನ್ನು ತಡೆಗಟ್ಟುವುದೆಂದರೆ ಮಾನವ ಸಮಾಜದ ಪ್ರಗತಿಯನ್ನೇ ಹಾಳು ಮಾಡಿದಂತಾಗುವುದು. ಪ್ರತಿಯೊಂದು ತಲೆಮಾರಿನಲ್ಲಿಯೂ ಮನುಷ್ಯನ ಬುದ್ಧಿಬಲ ವಿಕಾಸ ಹೊಂದುತ್ತ ಬಂದಿದೆ. ಆದುದರಿಂದ ಜನನವನ್ನು ನಿಯಂತ್ರಿಸದೆ ನಾವು ಮನುಷ್ಯನ ಜೀವಮಾನಕ್ಕೆ ಒಂದು ಮಿತಿಯನ್ನು ಹಾಕಿದೇವೆ. ”

“ ನೀವು ಪ್ರತಿಯೊಂದು ತಲೆಮಾರಿನಲ್ಲಿಯೂ ಮನುಷ್ಯನ ಬುದ್ಧಿ ಬೆಳೆಯುತ್ತ ಹೋಗುತ್ತದೆ ಎಂದು ನುಡಿಯುತೀರಿ. ಆದರೆ ನಿಮ್ಮ ಸಮಾಜದ ಜನಸಾಮಾನ್ಯರ ಇರವನ್ನು ನೋಡಿದರೆ ನನಗೆ ಹಾಗೆನಿಸುವುದಿಲ್ಲ. ”

“ ನಮ್ಮ ಸಮಾಜದ ಬಗೆಯನ್ನೇ ನೀನು ಅರಿತಿಲ್ಲ. ನಮ್ಮ ಸಮಾಜಕ್ಕೆ ನೀನು ಅಪರಿಚಿತ. ನಮ್ಮ ಸಮಾಜವನ್ನು ನಾಲ್ಕು ಬಗೆಯಾಗಿ ವಿಭಾಗಿಸಿದೇವೆ. ಒಂದನೆಯದಾಗಿ ಸಮಾಜದ ಮೆದುಳಿನಂತಿರುವ ವಿಜ್ಞಾನಿಗಳು. ಸಂಶೋಧನೆ, ಸಮಾಜದ ಪುನರ್‍ರಚನೆ ನಿಯಮಗಳನ್ನೇರ್ಪಡಿಸುವುದು ಮೊದಲಾದುವೆಲ್ಲಾ ವಿಜ್ಞಾನಿಗಳ ಮಾಳ್ಕೆಗಳು. ಎರಡನೆಯದಾಗಿ ಆಡಳಿತಗಾರರು. ಇವರಾದರೂ ವಿಜ್ಞಾನಿಗಳು. ಆದರೆ ಎರಡನೆಯ ಮಟ್ಟದವರು. ವಿಜ್ಞಾನಿಗಳು ಮಾಡಿದ ಕಾಯಿದೆಗಳನ್ನು ಅನುಸರಿಸಿ ಸಮಾಜದ ಆಡಳಿತವನ್ನು ಸುವ್ಯವಸ್ಥಿತವಾಗಿ ನೋಡಿಕೊಳ್ಳುವುದು ಇವರ ಕೆಲಸ. ಮೂರನೆಯದಾಗಿ ನೌಕರರು ಮತ್ತು ಯಾಂತ್ರಿಕ ಕೆಲಸಗಾರರು. ಕೊನೆಯದಾಗಿ ಈ ಮೂರು ವರ್ಗಗಳಿಗೂ ಸೇರದ ಜನಸಾಮಾನ್ಯರು ಅವರಿಗೆ ವಾರಕ್ಕೆರಡು ದಿನ ದುಡಿವುದಲ್ಲದೆ ಇತರ ಯಾವ ಬಗೆಯ ಹೊಣೆಯೂ ಅವರಿಗಿಲ್ಲ. ಬದುಕುವುದು, ಬಾಳುವುದೇ ಅವರ ಮುಖ್ಯ ಗುರಿ. ”

“ ಈ ಬಗೆಯ ಸಮಾಜ ರಚನೆ ಜನಸಾಮಾನ್ಯರಿಂದ ಅವರ ಹಕ್ಕು ಬಾಧ್ಯತೆಗಳನ್ನು ಕಸಿದುಕೊಳ್ಳುವುದಲ್ಲ!” ನಾನು ಪ್ರಶ್ನಿಸಿದೆ. “ ಜನಜಂಗುಳಿ ನಿಮ್ಮ ಆಡಳಿತಕ್ಕೆ ವಿರುದ್ಧವಾಗಿ ಕ್ರಾಂತಿಯನ್ನೆಬ್ಬಿಸಿದರೆ ? ”

“ ಕ್ರಾಂತಿಯನ್ನೆಬ್ಬಿಸುವುದು ಎಂಟು ಹತ್ತು ಶತಮಾನಗಳ ಹಿಂದಿನ ನುಡಿಯಾಗಿದೆ. ವಿಜ್ಞಾನಿಗಳು ಮೊದಲಾದ ಬುದ್ಧಿಶಾಲಿಗಳ ಮುಂದಾಳುತನ ಇಲ್ಲದಿದ್ದರೆ ಅಂದು ಜನಜಂಗುಳಿಯ ಕ್ರಾಂತಿ ಗೆಲುವನ್ನು ಪಡೆಯುತ್ತಿರಲಿಲ್ಲ. ಸಮಾಜ ಸುವ್ಯವಸ್ಥೆಯಿಂದ ಸಾಗಬೇಕಾದರೆ, ಬುದ್ಧಿಶಾಲಿಗಳು ಆಡಳಿತದ ಚುಕ್ಕಾಣಿ ಹಿಡಿಯಬೇಕು. ಹಾಗಲ್ಲದೆ ಜಡಬುದ್ಧಿಯ ಮಾನವನು ಶಾಸನ ಸೂತ್ರವನ್ನು ಹಿಡಿದರೆ, ಸಮಾಜದಲ್ಲಿ ಗೊಂದಲ ಅವ್ಯವಸ್ಥೆಗಳು ತಪ್ಪವು. ಹತ್ತು ಶತಮಾನಗಳ ಹಿಂದಿನ ಚರಿತ್ರೆಯನ್ನೇ ತೆಗೆದುಕೋ. ಅಂದು ಪ್ರತಿಯೊಂದು ಪೀಳಿಗೆಯಲ್ಲಿಯೂ ಯುದ್ಧವೆಂಬ ಸೋಂಕು ರೋಗ ಮಾನವ ಸಮಾಜವನ್ನು ಬಾಧಿಸದೆ ಬಿಟ್ಟಿಲ್ಲ. ಅಂದಿನ ಆಡಳಿತಗಾರರು ಲಕ್ಷಾಂತರ ಮಂದಿಯನ್ನು ಯುದ್ಧರಂಗದಲ್ಲಿ ಬಲಿಗೊಡುತ್ತಿದ್ದರು. ಆದರೆ ವಿಜ್ಞಾನಿಗಳು ಸಮಾಜರಚನೆಯಲ್ಲಿ ಕೈ ಹಾಕಿದಂದಿನಿಂದ ಒಂದೇ ಒಂದು ಯುದ್ಧ ಉಂಟಾಗಿಲ್ಲ. ನಾವು ಯುದ್ಧವನ್ನು ಪ್ರಪಂಚದಿಂದ ನಿವಾರಿಸಿದೇವೆ; ಜನತೆಗೆ ಶಾಂತಿ ಸುಖಗಳನ್ನು ನೀಡಿದೇವೆ; ಮಾನವನ ದೈಹಿಕ ಶ್ರಮಗಳನ್ನು ಇಲ್ಲವಾಗಿಸಿದೇವೆ. ”

“ ನೀವು ವಿಜ್ಞಾನಿಗಳು ಹಿರಿಯ ಕಾರ್ಯಗಳನ್ನೇನೋ ಸಾಧಿಸಿದ್ದೀರಿ. ಆದರೆ ನಿಮ್ಮ ಸಾಹಸಮಯ ಎಸಕಗಳ ಪರಿಣಾಮವಾಗಿ ಮನುಷ್ಯನಾದರೂ ಒಂದು ಯಂತ್ರವಾಗಿ ಪರಿಣಮಿಸಿದಾನೆ. ಅವನ ಬಾಳ್ವೆಗೆ ಒಂದು ಗುರಿಯಿಲ್ಲ. ದುಡಿಯುವ ಶ್ರಮವನ್ನು ಇಲ್ಲವಾಗಿಸಿದುದರಿಂದ ಅವನ ಬದುಕಿಗೇ ಅರ್ಥವಿಲ್ಲದಾಗಿದೆ. ”

“ ನಿನ್ನ ನುಡಿ ಹತ್ತು ಶತಮಾನಗಳ ಹಿಂದಿನದು. ಆದರ್ಶವಾದಿಗಳು ಹೇಳುವ ಮಾತು. ” ಅಧಿಕಾರಿ ನಗು ಬೀರುತ್ತಾ ಉಸುರಿದ. “ ಮನುಷ್ಯ ಒಂದು ಯಂತ್ರವಲ್ಲವೆಂದು ಆಗಿನ ಕಾಲದವರು ಹೇಳುತ್ತಿದ್ದರು. ಆದರೆ ಅವನು ಸೃಷ್ಟಿ ನಿರ್ಮಿಸಿದ ಒಂದು ಯಂತ್ರವಾಗಿದಾನೆ. ಆದುದರಿಂದ ಅವನ ದಿನಚರಿ ಯಾಂತ್ರಿಕವಾದುದರಲ್ಲಿ ತಪ್ಪೇನಿದೆ? ನಾವೂ ಪ್ರಯೋಗಶಾಲೆಯಲ್ಲಿ ಕೃತಕ ಮಾನವನನ್ನು ನಿರ್ಮಿಸಿದೇವೆ. ಆದರೆ ಈ ತನಕ ಅವನಿಗೆ ಬುದ್ಧಿ ಭಾವನೆಗಳನ್ನು ಕೊಡಲು ನಮಗೆ ಸಾಧ್ಯವಾಗಿಲ್ಲ. ಆದರೆ ಆತ ನಿರ್ದಿಷ್ಟವಾದ ಕೆಲಸಗಳನ್ನು ಮಾಡಬಲ್ಲ. ಮುಂದಿನ ಶತಮಾನದಲ್ಲಿ ಬುದ್ಧಿ ಭಾವನೆಗಳಿಂದ ಕೂಡಿದ ಮನುಷ್ಯನನ್ನು ನಿರ್ಮಿಸಲು ಸಾಧ್ಯವಾಗಬಹುದು. ಇರಲಿ.

ಈ ಸಂಗತಿಗಳನ್ನು ಎಷ್ಟು ಮಾತಾಡಿದರೂ ಮುಗಿಯದು. ಬಹಳ ಕೆಲಸಗಳು ನನ್ನನ್ನು ಕಾದು ಕುಳಿತಿವೆ. ನೀನು ವಿದ್ಯಾಲಯವನ್ನು ನೋಡಿ ಬಾ. ”

ಹೀಗೆಂದು ನುಡಿದ ಅಧಿಕಾರಿ ಶಿಕ್ಷಣ ಮಂದಿರವನ್ನು ನೋಡಲು ನಮಗೆ ಅನುಮತಿ ಪತ್ರಗಳನ್ನು ಬರೆದುಕೊಟ್ಟ. ವಿದ್ಯಾಲಯದ ವಿವಿಧ ವಿಭಾಗಗಳನ್ನು ತೋರಿಸಿಕೊಡಲು ನೌಕರನೂ ನಮ್ಮೊಡನೆ ಬಂದ. ಆತನನ್ನು ನಾವು ಹಿಂಬಾಲಿಸಿದೆವು. ದಾರಿಯಲ್ಲಿ ಸಾಗರ ಹೇಳಿದ. “ ಅಧಿಕಾರಿಗಳಿಗೆ ನೀನು ತುಂಬಾ ಮೆಚ್ಚಿಕೆಯಾದಂತೆ ಕಾಣುತದೆ. ಅವರು ನಮ್ಮೊಡನೆ ಇಷ್ಟು ಮಾತಾಡುವುದಿಲ್ಲ. ಅವರೊಡನೆ ಮಾತಾಡಲು ನಮಗೆ ವಿಷಯಗಳೂ ಇರುವುದಿಲ್ಲ. ಅಲ್ಲವೇ ಮೀನಾ ? ”

“ ಹೌದು. ಈ ಅಧಿಕಾರಿಗಳನ್ನು ಕಾಣುವಾಗಲಂತು ನನಗೆ ಭಯವಾಗುತ್ತದೆ. ” ಎಂದಳಾಕೆ.

“ ಏಕೆ ? ” ಎಂದು ನಾನು ಕೇಳಿದೆ.

“ ಒಂದನೆಯದಾಗಿ ಅವರು ನಮ್ಮ ಹಾಗಿಲ್ಲ. ತಮ್ಮ ಯಂತ್ರಗಳಿಂದ ಅವರು ಏನು ಬೇಕಾದರೂ ಮಾಡಬಲ್ಲರು. ಮೊನ್ನೆ ಚಲಚಿತ್ರ ಮಂದಿರದ ನಾಲ್ಕನೆಯ ನೆಲೆಯಿಂದ ಒಬ್ಬ ಕೆಳಗುರುಳಿದ. ಕೈಕಾಲು ಮುರಿದುಹೋದುವು. ಅವನನ್ನು ವೈದ್ಯಾಲಯಕ್ಕೆ ಕರೆದುಕೊಂಡು ಹೋದರು. ಅಲ್ಲಿ ಏನು ಮಾಡಿದರು ಗೊತ್ತೇ ? ”

“ ಮುರಿದುಹೋದ ಅಂಗಾಂಗಗಳನ್ನು ಸರಿಪಡಿಸಿರಬಹುದು.” ಎಂದು ನಾನು ಹೇಳಿದೆ.

“ ಕೈಕಾಲು ಮುರಿದಿದ್ದರೆ ಕೃತಕ ಕೈಕಾಲುಗಳನ್ನು ಹಚ್ಚಿ ಸರಿಪಡಿಸುತಿದ್ದರು. ಆದರೆ ಮೆದುಳಿಗೂ ಪೆಟ್ಟಾಗಿತ್ತಂತೆ. ಅವನ ಮೈಮೇಲೆ ವಿದ್ಯುತ್ತನ್ನು ಪ್ರಯೋಗಿಸಿ ಕೊಂದುಬಿಟ್ಟರು. ಒಬ್ಬ ಮನುಷ್ಯನನ್ನು ಕೊಲ್ಲುವುದೆಂದು ಆಲೋಚಿಸುವಾಗ ನನ್ನ ಮೈಮೇಲಿನ ರೋಮಗಳು ಎದ್ದು ನಿಲ್ಲುವುವು. ”

“ ಮೀನಾ, ಈ ವೈಜ್ಞಾನಿಕ ಯುಗದಲ್ಲಿಯೂ ನಿನ್ನ ಹೆಣ್ಣುತನ ಅಳಿದು ಹೋಗಿಲ್ಲ. ” ನೌಕರ ನಗುತ್ತಾ ನುಡಿದ.

ನಾವು ವಿದ್ಯಾಲಯದ ಶಿಶು ವಿಭಾಗಕ್ಕೆ ಬಂದೆವು. ಇಲ್ಲಿ ಆರು ವಯಸ್ಸಿನಿಂದ ಹತ್ತು ಹರುಷ ಪ್ರಾಯದ ಮಕ್ಕಳಿದ್ದರು. ಹತ್ತಾರು ಮಂದಿ ಶಿಕ್ಷಕಿಯರಿದ್ದರು- ಯಾವಾಗಲೂ ಬೆಳಕು ಬಿಸಿಲುಗಳು ಬೀಳತಕ್ಕಂತಹ ಕೋಣೆಗಳು.

ಗೋಡೆಗಳಿಲ್ಲ ಬಣ್ಣ ಬಣ್ಣದ ಗಾಜಿನಿಂದ ನಿರ್ಮಿತವಾದುವುಗಳು. ಬಿಸಿಲಿನ ತಾಪ ತೀವ್ರವೆನಿಸಿದಾಗ ಗೋಡೆಯಮೇಲಿನ ತಿರುಗಣೆಯೊಂದನ್ನು ತಿರುಗಿಸಿದರೆ ಸಾಕು; ಹಾಲು ಬಣ್ಣದ ಪರದೆಗಳು ಗೋಡೆಯನ್ನು ಆವರಿಸುತ್ತಿದ್ದುವು. ಗೋಡೆ ತುಂಬಾ ಚಿತ್ರಗಳನ್ನು ತೂಗು ಹಾಕಿದ್ದರು. ಅವುಗಳಲ್ಲಿ ಹಲವು ಮರಗಿಡಗಳ, ಮೃಗಪಕ್ಷಿಗಳ ಚಿತ್ರಗಳು. ಯಂತ್ರಗಳ ಚಿತ್ರಗಳು ಇನ್ನು ಹಲವು. ಇನ್ನುಳಿದುವು ಸುಪ್ರಸಿದ್ಧ ವಿಜ್ಞಾನಿಗಳ ಭಾವಚಿತ್ರಗಳು. ಪ್ರತಿಯೊಂದು ಕೋಣೆಯಲ್ಲಿಯೂ ಗ್ರಾಮಫೋನ್, ರೇಡಿಯೋ ಸೌಕರ್ಯಗಳಿದ್ದುವು. ಬಾಲಕರಿಗೆ ಆಟವಾಡಲು ಮೋಟಾರಿನಂತಹ ಸಣ್ಣ ಸಣ್ಣ ಯಂತ್ರಗಳಿದ್ದುವು.

ನಾವು ತಲುಪಿದಾಗ ಬಾಲಕರು ಕೋಣೆಯೊಂದರಲ್ಲಿ ನೆರೆದಿದ್ದರು. ರೇಡಿಯೋ ಗ್ರಾಹಕ ಯಂತ್ರದಿಂದ ಬಾನುಲಿಗೆ ಅವರು ಕಿವಿಗೊಡುತ್ತಿದ್ದರು. ಅವರು ನಿಃಶಬ್ದವಾಗಿ ಬಾನುಲಿಯನ್ನು ಆಲಿಸುತ್ತಿದ್ದರು. ಮಕ್ಕಳಿಗಾಗಿ ಇರತಕ್ಕ ಒಂದು ಕಥೆಯನ್ನು ಬಾನುಲಿ ನಿಲ್ದಾಣದಿಂದ ವಿಸರಣೆ ಮಾಡುತ್ತಿದ್ದರು. ಆದರೆ ಅದು ನಾವು ಮಕ್ಕಳಿಗೆ ಹೇಳಿಕೊಡುವ ತೋಳ ಕುರಿಮರಿ ಕಥೆಯಲ್ಲ. ಬಾಲಕರ ಸುಖ ಸೌಕರ್ಯಗಳಿಗೋಸ್ಕರ ಹೆಣಗಿದ ಒಬ್ಬ ವಿಜ್ಞಾನಿಯ ಚರಿತ್ರೆ ಅದು. ಬಾಲಕರು ಅದನ್ನು ಬಹು ಉತ್ಸುಕತೆಯಿಂದ ಕೇಳುತ್ತಿದ್ದರು.

ಕೆಲ ನಿಮಿಷಗಳಲ್ಲಿಯೇ ಬಾನುಲಿ ನಿಂತಿತು. ಶಿಕ್ಷಕಿಯೊಬ್ಬಳನ್ನು ನಾನು ಪ್ರಶ್ನಿಸಿದೆ "ಮಕ್ಕಳಿಗೆ ನೀವು ಓದುಬರಹ ಕಲಿಸುವುದಿಲ್ಲವೇ?"

"ಇಲ್ಲ" ಎಂದಳಾಕೆ. "ಎಲ್ಲರಿಗೂ ಅಕ್ಷರಾಭ್ಯಾಸ ಅಗತ್ಯವಿಲ್ಲೆಂದು ಶಿಕ್ಷಣ ವಿಭಾಗದವರು ನಿಶ್ಚಯಿಸಿದಾರೆ. ಮುಂದೆ ವಿಜ್ಞಾನಿಗಳಾಗಿ, ಆಡಳಿತಗಾರರಾಗಿ, ಕೆಲಸಗಾರರಾಗಿ ಆರಿಸಲ್ಪಟ್ಟವರು ಮಾತ್ರ ಓದುಬರಹ ಕಲಿಯುವರು. ಅವರಿಗೆ ಅದು ಅಗತ್ಯವಾಗಿದೆ."

"ಹಾಗಾದರೆ, ಇಲ್ಲಿ ಬಾಲಕರು ಕಲಿಯುವುದೇನು?"

"ಹಾಡುಗಳನ್ನೂ ಕಥೆಗಳನ್ನೂ ಕಲಿಯುತ್ತಾರೆ. ತಮ್ಮ ಮೈ ಕೈ ಉಡಿಗೆ ತೊಡಿಗೆಗಳನ್ನು ಶುಚಿಯಾಗಿಡಲು ಕಲಿಯುತ್ತಾರೆ. ಎಲ್ಲದಕ್ಕಿಂತಲೂ ಬಾಲಕರಲ್ಲಿ ಮತ್ಸರ ದ್ವೇಷಗಳು ಹುಟ್ಟದಂತೆ ನೋಡಿಕೊಳ್ಳುವುದು ಮೊದಲನೆಯ ಕೆಲಸವಾಗಿದೆ. ನಾವು ಪ್ರಪಂಚದ ಮಕ್ಕಳೆಲ್ಲರೂ ಒಂದು ಬಳಗದವರು. ನಾವು ಜಗಳವಾಡಿದರೆ ನಮ್ಮನ್ನು ಸಾಕಿ ಸಲಹಿದ ವಿಜ್ಞಾನಿಗಳು ನೊಂದುಕೊಳ್ಳುತಾರೆ. ಒಂದು ಕಾಲದಲ್ಲಿ ಪ್ರಪಂಚದ ಜನರೆಲ್ಲರೂ ತೋಳ ಕರಡಿ

ಗಳಂತೆ ಕಚ್ಚಾಡುತಿದ್ದರು. ಆ ಜಗಳಗಳನ್ನೆಲ್ಲಾ ವಿಜ್ಞಾನಿಗಳು ತಪ್ಪಿಸಿವಾರೆ. ನಾವು ಕಲಹ ಮಾಡಿದರೆ ವಿಜ್ಞಾನಿಗಳು ಸಿಟ್ಟುಗೊಂಡು ಮೃತ್ಯು ಜ್ವಾಲೆಯಿಂದ ಸುಟ್ಟು ಬೂದಿಮಾಡಿಬಿಡುತಾರೆ. ಈ ಪರಿಯ ಉಪದೇಶ, ಕಥೆ, ಹಾಡುಗಳಿಂದ ಬಾಲಕರಲ್ಲಿ ಪ್ರಪಂಚದ ಮಾನವರೆಲ್ಲ ಒಂದು ಕುಟುಂಬದವರು ಎಂಬ ಮನೋವೃತ್ತಿಯನ್ನು ಬೆಳಸುವುದು ಅತಿ ಮುಖ್ಯವಾದುದು. ಅವೇ ಶಿಕ್ಷಣದ ಗುರಿ."

"ಸ್ವತಂತ್ರವಾದ ವಿಚಾರ ಶಕ್ತಿಯನ್ನು ಬಾಲಕರಲ್ಲಿ ಬೆಳೆಯಲು ನೀವು ಎಡೆಕೊಡುವುದಿಲ್ಲ."

"ಸ್ವಾತಂತ್ರ್ಯವೆಂದರೆ ಮನಸ್ಸಿನ ಒಂದು ಕಲ್ಪನೆ, ಅದು ನಮ್ಮ ಕೈಗೆ ಸಿಲುಕದ ಆಕಾಶ ಕುಸುಮ . ಹಾಗೆ ನಮ್ಮ ವಿಜ್ಞಾನಿಗಳು ಹೇಳುತಿದಾರೆ. ಅವರು ಹೇಳಿದ ಮೇಲೆ ಅದು ಸರಿಯಾಗಿರಲೇಬೇಕು. ನಾವು ಸೇವಿಸುವ ವಾಯು, ಆಹಾರ, ಉಡಿಗೆ ತೊಡಿಗೆಗಳು ಇವುಗಳಿಗೆಲ್ಲಾ ನಾವು ಬೇರೆಯವರನ್ನು ಆಶ್ರಯಿಸಬೇಕು. ಹಾಗೆಂದ ಮೇಲೆ ಸ್ವಾತಂತ್ರ್ಯವೆಲ್ಲಿಂದ ಬಂತು? ಒಂದು ಕಾಲದಲ್ಲಿ ಪ್ರಪಂಚದ ಜನರಿಗೆ ಸ್ವಾತಂತ್ರ್ಯದ ಹುಚ್ಚು ಹಿಡಿದಿತ್ತಂತೆ. ಆಗ ಮಾನವರು ನಮ್ಮಂತೆ ನಾಗರಿಕರಾಗಿರಲಿಲ್ಲ. ಏನೋ ನೆಲದ ಮೇಲೆ ಹರಿದಾಡುವ ಒಂದೆರಡು ಯಂತ್ರಗಳನ್ನು ಕಂಡುಹಿಡಿದಿದ್ದರು ಗುಬ್ಬಚ್ಚಿಗಳಂತೆ ಪುಟ್ಟ ವಿಮಾನಗಳನ್ನು ನಿರ್ಮಿಸಿದ್ದರು. ಆ ಕಾಲದ ಜನರು ಸ್ವಾತಂತ್ರ್ಯವೆಂದು ಹೇಳಿ ಜೇಡರಂತೆ ಹೊಡೆದಾಡುತಿದ್ದರು. ಈಗ ಅಂತಹ ಗೊಂದಲಗಳೇನೂ ಇಲ್ಲ."

"ಬಾಲಕರು ಯಾವ ಆಟಗಳನ್ನು ಆಡುವರು?" ಬಾಲಕರ ಕ್ರೀಡೆಗಳನ್ನರಿಯಲು ನಾನು ಆಸಕ್ತಿ ತೋರಿಸಿದೆ.

"ಮೈದಾನದಲ್ಲಿ ಓಡಾಡುತಾರೆ. ಸಣ್ಣ ಪುಟ್ಟ ವಾಹನಗಳನ್ನು ಕಟ್ಟಡದ ಸುತ್ತಲೂ ಓಡಿಸುತಾರೆ. ಯಾಂತ್ರಿಕ ಉಯ್ಯಾಲೆಗಳಲ್ಲಿ ತೂಗಾಡುತಾರೆ, ನೂರೈವತ್ತಡಿಗಳೆತ್ತರದ ಜಾರುಗುಪ್ಪೆಗಳಿಂದ ಜಾರುತಾರೆ. ಅವರಿಗೆ ಇಷ್ಟವೆನಿಸಿದ ಆಟಗಳನ್ನೆಲ್ಲಾ ಆಡಬಹುದು."

ಆದರೆ ಅವರ ಆಟಗಳಲ್ಲಿ ಸ್ಪರ್ಧೆಯನ್ನುಂಟು ಮಾಡತಕ್ಕ ಯಾವ ಬಗೆಯ ವಿನೋದಗಳೂ ಇಲ್ಲ. ಕ್ರೀಡಾರಂಗದಲ್ಲಿ ಸ್ಪರ್ಧೆಯನ್ನು ಹುಟ್ಟಿಸತಕ್ಕ ಎಲ್ಲ ಬಗೆಯ ಕ್ರೀಡೆಗಳನ್ನು ನಿವಾರಿಸಿದ್ದರು. ಅವರ ಶಿಕ್ಷಣ ಕ್ರಮದಲ್ಲಿ ಆಟ

ಪಾಟಗಳಲ್ಲಿ ವ್ಯಕ್ತಿತ್ವವನ್ನು ಸ್ಫುಟಗೊಳಿಸಬಲ್ಲ ಯಾವ ಅಂಶಗಳೂ ಇರಲಿಲ್ಲ. ಹಾಡುವಾಗ ಒಬ್ಬೊಬ್ಬರಾಗಿ ಹಾಡುತಿರಲಿಲ್ಲ. ಹತ್ತು ಇಪ್ಪತ್ತು ಮಂದಿ ಒಂದು ಗೂಡಿ ಹಾಡುತಿದ್ದರು. ಅವರು ತೊಡುತಿದ್ದ ಅರಿವೆಗಳಾದರೂ ಒಂದೇ ಬಗೆಯವು. ಅವರುಣ್ಣುತಿದ್ದ ಆಹಾರಗಳಾದರೂ ಒಂದೇ ಮಾದರಿಯವು. ಅಧ್ಯಾಪಕಿಯರು ಪಾಠಗಳನ್ನು ನಡೆಸುತಿರುವಾಗ, 'ನೀನು' ಎಂದು ಒಬ್ಬನನ್ನು ನಿರ್ದೇಶಿಸಿ ಹೇಳುತಿರಲಿಲ್ಲ. "ನೀವು" ಎಂದು ಇಡಿ ಗುಂಪನ್ನೇ ಸಂಬೋಧಿಸಿ ನುಡಿಯುತಿದ್ದರು. ಅಲ್ಲಿನ ಚಟುವಟಿಕೆಗಳಿಂದ ಬಾಲಕರ ಬೌದ್ಧಿಕವಿಕಾಸಕ್ಕೆ ಎಳ್ಳನಿತೂ ಅವಕಾಶವಿರಲಿಲ್ಲ. ತಾವೆಲ್ಲರೂ ಒಂದು ಎಂಬ ಭಾವನೆಯನ್ನು ಬಾಲಕರಲ್ಲಿ ಬೇರೂರುವಂತೆ ಮಾಡುವುದು, ಅಧ್ಯಾಪಕರು ಹಾಕಿಕೊಟ್ಟ ಪರಂಪರೆಯನ್ನು ಅನುಸರಿಸುವುದು, ವಿಜ್ಞಾನಿಗಳೇ ತಮ್ಮೆಲ್ಲರನ್ನು ಪೊರೆವ ದಾತಾರರು ಎಂದು ವಿಜ್ಞಾನಿಗಳನ್ನು ಪೂಜಿಸಲು ಕಲಿಸುವುದು, ಇವು ಅಲ್ಲಿನ ಪ್ರಾಥಮಿಕ ಶಿಕ್ಷಣದ ವಿಷಯಗಳು. ಎಳೆಯರ ಮನಸ್ಸಿನಲ್ಲಿ ಸ್ಪರ್ಧೆ, ಘರ್ಷಣೆಗಳಿಗೆ ಅವಕಾಶ ಒದಗದಂತೆ ನೋಡಿಕೊಳ್ಳುವುದು ಅತಿಮುಖ್ಯವಾದುದು.

ನೌಕರ ನಮ್ಮನ್ನು ಮುಂದೆ ಕರೆದೊಯ್ದ. ಈಗ ನಾವು ಮಾಧ್ಯಮಿಕ ಶಿಕ್ಷಣ ವಿಭಾಗಕ್ಕೆ ಬಂದೆವು. ಈ ವಿಭಾಗದಲ್ಲಿ ಐನೂರಕ್ಕೆ ಮೇಲ್ಪಟ್ಟ ವಿದ್ಯಾರ್ಥಿಗಳಿದ್ದರು. ಪ್ರತಿ ಇಪ್ಪತ್ತು ವಿದ್ಯಾರ್ಥಿಗಳಿಗೆ ಒಬ್ಬೊಬ್ಬರಂತೆ ಶಿಕ್ಷಕರಿದ್ದರು. ಶಿಕ್ಷಕರಲ್ಲಿ ಅರ್ಧಪಾಲು ಗಂಡಸರು, ಉಳಿದವರು ಸ್ತ್ರೀಯರು.

ಪ್ರಾಥಮಿಕ ಶಿಕ್ಷಣ ವಿಭಾಗದಲ್ಲಿ ನೆಟ್ಟ ಯಾಂತ್ರಿಕ ಮನೋವೃತ್ತಿ ಇಲ್ಲಿ ಮೊಳೆತು ಗಿಡವಾಗುವುದು; ತಳಿತು ಕವಲೊಡೆಯುವುದು. ವ್ಯಕ್ತಿ ಸ್ವಾತಂತ್ರ್ಯ ವಿದ್ಯಾರ್ಥಿಗಳಿಗಿಲ್ಲ. ಅವರು ಪ್ರತಿಯೊಂದು ಕೆಲಸವನ್ನೂ ಗುಂಪು ಗುಂಪಾಗಿಯೇ ಮಾಡಬೇಕೆಂಬುದು ಇಲ್ಲಿಯ ನಿಯಮ. ಪ್ರತಿಯೊಂದು ಗುಂಪಿಗೂ ಒಬ್ಬೊಬ್ಬ ಅಧ್ಯಾಪಕನಿರುತಿದ್ದ. ಅವನ ಮಾರ್ಗದರ್ಶನದಂತೆ ವಿದ್ಯಾರ್ಥಿಗಳು ನಡೆಯುತಿದ್ದರು. ಗುಂಪು ಗುಂಪುಗಳಲ್ಲಿ ಸ್ಪರ್ಧೆ ಒದಗದಂತೆ ಅಧ್ಯಾಪಕರು ಎಚ್ಚರಿಕೆ ತೆಗೆದುಕೊಳ್ಳುತಿದ್ದರು. ಮಾಧ್ಯಮಿಕ ಶ್ರೇಣಿಯಲ್ಲಿಯೂ ಓದು ಬರಹಗಳನ್ನು ಕಲಿಸುವುದಿಲ್ಲ. "ಜನಸಾಮಾನ್ಯರಿಗೆ ಆಕಾಶವಾಣಿಯ ಮೂಲಕ ಪ್ರಪಂಚದ ವರ್ತಮಾನಗಳು ತಿಳಿಯುತವೆ. ಮನೋರಂಜನೆಗೆ ಬೇಕಾದ ಸಂಗೀತ, ಕತೆ-ಸಾಹಿತ್ಯಗಳು ಬಾನುಲಿಯ ಮೂಲಕ ದೊರಕುತವೆ. ಹೊತ್ತು ಕಳೆಯಲು ಚಲಚಿತ್ರಗಳಿವೆ ಇನ್ನೇಕೆ ಓದು ಬರಹ ಕಲಿಯಬೇಕು ? ಜನ

ತೆಯ ಪಾಲಿಗೆ ಅದೊಂದು ಹೊರೆ. ನಿಮ್ಮ ಸರಕಾರವಾದರೂ ಜನಸಾಮಾನ್ಯರು ಓದುಬರಹ ಕಲಿಯಲು ಉತ್ತೇಜನ ಕೊಡುತಲಿಲ್ಲ." ಎಂದು ಅಧ್ಯಾಪಕರೊಬ್ಬರು ನುಡಿದರು. ಓದುಬರಹಗಳಿಗೆ ಅವಕಾಶವಿಲ್ಲದುದರಿಂದ ಜನಸಾಮಾನ್ಯರಲ್ಲಿ ಸಾಹಿತ್ಯಾಭಿರುಚಿ ಕುಂದಿದೆಯೆಂದು ನಾನೆಣಿಸಿದೆ. ನನ್ನ ಊಹೆ ನಿಜವಾದುದಾಗಿತ್ತು.

ಶಿಕ್ಷಣದಲ್ಲಿ ಚಿತ್ರಕಲೆಗೆ ವಿಶೇಷವಾದ ಸ್ಥಾನವಿತ್ತು. ಅವರ ಶಿಕ್ಷಣದ ಮಾಧ್ಯಮವೂ ಚಿತ್ರಕಲೆಯಾಗಿತ್ತೆಂದು ಹೇಳಿದರೆ ಅತಿಶಯೋಕ್ತಿಯಾಗದು. ಆದರೆ ಮರಗಿಡಗಳ, ಬೆಟ್ಟಗುಡ್ಡಗಳ ಮತ್ತು ಸುರ್ಯೋದಯದ ಚಿತ್ರಗಳಿಗೆ ಅಲ್ಲಿ ಎಡೆಯಿರಲಿಲ್ಲ. ಜನಾಂಗ ಪೂಜಿಸುತಿದ್ದ ದೈವಗಳೆಂದರೆ ಯಂತ್ರಗಳು. ಯಂತ್ರಗಳೇ ಚಿತ್ರಕಲೆಯ ಗದ್ದುಗೆಯನ್ನೇರಿದ್ದುವು. ಪ್ರತಿಯೊಂದು ಗುಂಪಿನ ಮುಂದೆಯೂ ದೋಣಿಗಳ, ಮೋಟಾರುಕಾರುಗಳ, ಹಡಗುಗಳ, ಬೇಸಾಯದ ಯಂತ್ರಗಳ,ವಿಮಾನಗಳ ಮಾದರಿಗಳು ಇರುತಿದ್ದುವು. ವಿದ್ಯಾರ್ಥಿಗಳು ಮೇಜದ ಸುತ್ತಲೂ ನೆರೆದು, ಕಾಗದಗಳ ಮೇಲೆ ಬಣ್ಣ ಬಣ್ಣದ ಪೆನ್ಸಿಲುಗಳಿಂದ, ಆಯಾ ಮಾದರಿಗಳ ಚಿತ್ರಗಳನ್ನು ತೆಗೆಯುತಿದ್ದರು. ಆ ಯಂತ್ರಗಳ ಪ್ರತಿಯೊಂದು ಭಾಗವನ್ನೂ ಗುರುತಿಸಿ, ಅಧ್ಯಾಪಕ ಪ್ರಯೋಜನಗಳನ್ನು ವಿವರಿಸಿ ಹೇಳುತಿದ್ದ. ಎಳೆಯರು ವಿಸ್ಮಯಚಕಿತ ಕಣ್ಣುಗಳೊಡನೆ ಅವನು ಹೇಳುವುದನ್ನು ಶ್ರದ್ಧೆಯಿಂದ ಕೇಳುತಿದ್ದರು. ಅಧ್ಯಾಪಕ ತನ್ನ ವಿವರಣೆಗಳಲ್ಲಿ "ವಿಜ್ಞಾನಿಗಳು ಉತ್ಕೃಷ್ಟವಾದ ಈ ಯಂತ್ರವನ್ನು ನಿರ್ಮಿಸಿ ಮನುಷ್ಯನ ದೇಹ ಶ್ರಮವನ್ನು ಕಡಿಮೆ ಮಾಡಿದರು. ಆದುದರಿಂದ ನಾವು ಅವರಿಗೆ ಋಣಿಗಳಾಗಿರಬೇಕು." ಎಂದು ಆಗಾಗ ಹೇಳುತಿದ್ದ.

ನಮ್ಮ ಕಾಲದಲ್ಲಿ ವಿದ್ಯಾರ್ಥಿಗಳು ಜನಾಂಗಗಳ ಚರಿತ್ರೆಗಳನ್ನು ಕಲಿಯುವಂತೆ ಆ ವಿದ್ಯಾರ್ಥಿಗಳು ಯಂತ್ರಗಳ ಚರಿತ್ರೆಗಳನ್ನು ಕಲಿಯುತಿದ್ದರು. ಪ್ರತಿಯೊಂದು ಯಂತ್ರ ಉತ್ಪನ್ನವಾದ ಬಗೆ, ಅದನ್ನು ಮೊದಲು ನಿರ್ಮಿಸಿದ ವಿಜ್ಞಾನಿ, ಪ್ರತಿಯೊಂದು ತಲೆಮಾರಿನಲ್ಲೂ ಯಂತ್ರದಲ್ಲುಂಟಾದ ಮಾರ್ಪಾಟುಗಳು, ಅದರಿಂದ ದೊರಕುವ ಪ್ರಯೋಜನಗಳು ಇತ್ಯಾದಿ ವಿಷಯಗಳನ್ನು ವಿದ್ಯಾರ್ಥಿ ಕಲಿಯಬೇಕಾಗಿದ್ದಿತು. ನೂರಾರು ಚಿತ್ರಗಳನ್ನು, ಮಾದರಿಗಳನ್ನು ತೋರಿಸಿ, ಅಧ್ಯಾಪಕ ವಿಷಯ ಮನದಟ್ಟಾಗುವಂತೆ ಬೋಧಿಸುತಿದ್ದ. ನೆಪೋಲಿಯನ್, ಛೆಂಗೀಸಖಾನ, ಪ್ರತಾಪಸಿಂಹ, ಶಿವಾಜಿ ಮೊದಲಾದವರ ಚರಿತ್ರೆ

ಗಳನ್ನು ಓದುವಾಗ ನಮ್ಮಲ್ಲಿ ಮೂಡಬಹುದಾದ ಭಯ, ವಿಸ್ಮಯ, ಕುತೂಹಲ ಗಳನ್ನು ನಲವತ್ತು ಐವತ್ತಾರು ಮುಂದಿನ ಎಳೆಯರು ಒಂದು ಟ್ರಾಕ್ಟರ್ ಅಥವಾ ಸೂರ್ಯನಿಂದ ಶಕ್ತಿ ಸಂಗ್ರಹಿಸುವ ಯಂತ್ರ ಇವುಗಳ ಚರಿತ್ರೆಯನ್ನು ಕೇಳುವಾಗ ಅನುಭವಿಸುತಿದ್ದರು.

ಮಾನವ ಸಮಾಜದ ಇತಿಹಾಸವನ್ನು ವಿದ್ಯಾರ್ಥಿಗಳಿಗೆ ಕಲಿಸುತಿದ್ದರು. ವಿಜ್ಞಾನದ ಉದಯದೊಡನೆ ಅಂದರೆ ಕ್ರಿಸ್ತಶಕ ಹದಿನಾರನೆಯ ಶತಮಾನ ದಿಂದ ಅವರ ಚರಿತ್ರೆ ಪ್ರಾರಂಭವಾಗುತಿದ್ದಿತು. ಅದಕ್ಕೂ ಪೂರ್ವದ ಇತಿಹಾಸ ವನ್ನು 'ಪುರಾತನ ಕಾಲ' ಎಂದು ಬಿಟ್ಟಿದ್ದರು. ಪ್ರತಿಯೊಂದು ಕಾಲದ ಸಮಾಜ ಸ್ಥಿತಿ, ಆಡಳಿತ ಕ್ರಮ, ಆಯಾ ಕಾಲದಲ್ಲುಂಟಾದ ಸಂಶೋಧನಗಳು ಈ ವಿಷಯ ಗಳನ್ನೆಲ್ಲಾ ಅಧ್ಯಾಪಕರು ಚಲಚಿತ್ರಗಳ ಮೂಲಕ ಬೋಧಿಸುತಿದ್ದರು. ಇಲ್ಲಿ ಚಲಚಿತ್ರಗಳೇ ಶಿಕ್ಷಣದ ಮಾಧ್ಯಮವಾಗಿದ್ದುವು. ಚಲಚಿತ್ರಗಳನ್ನು ನೋಡಿ ಬೇರೆ ಬೇರೆ ಶತಮಾನಗಳ ಉಡಿಗೆ ತೊಡಿಗೆಗಳು, ಅವರು ಉಪಯೋಗಿಸುತಿದ್ದ ಸಾಧನ ಗಳು, ಅವರ ಜೀವನಕ್ರಮ ಮೊದಲಾದುವುಗಳನ್ನು ಎಳೆಯರು ಅರಿತುಕೊಳ್ಳುತಿ ದ್ದರು: ತಾವು ಅರಿತುಕೊಂಡುದನ್ನು ಮರುದಿನ ಚಿತ್ರಗಳ ಮೂಲಕ ತೋರಿಸುತಿ ದ್ದರು.

ಭೂಶಾಸ್ತ್ರ ವಿಭಾಗದಲ್ಲಿ ಭೂಮಿಯ ನೂರಾರು ಪಟಗಳನ್ನು ತೂಗು ಹಾಕಿದ್ದರು. ಕ್ರಿಸ್ತಶಕ ಇಪ್ಪತ್ತನೇ ಶತಮಾನದಿಂದ ಮುಂದೆ ಹತ್ತು ಶತ ಮಾನಗಳಲ್ಲಿ ಈ ಭೂಮಿಯ ಮೇಲೆ ಉಂಟಾದ ಮಾರ್ಪುಗಳನ್ನು ಈ ಪಟ ಗಳನ್ನು ನೋಡಿ ತಿಳಿಯಬಹುದು. ಆ ಕಾಲದಲ್ಲಿ ಭೂವಿಭಾಗ ಬಹುವಾಗಿ ಪರಿವರ್ತನೆಗೊಂಡಿತ್ತು. ಪರ್ವತಗಳು ಅತಿ ವಿರಳವಾಗಿದ್ದುವು. ಹಿಮಾಲಯ, ಆಲ್ಪ್ಸ್ ಪರ್ವತ, ಅಮೇರಿಕಗಳಲ್ಲಿ ರಾಕಿ ಮತ್ತು ಎಂಡೀಸ್ ಪರ್ವತಗಳ ಸಾಲು ಇವಲ್ಲದೆ ಇತರ ಪರ್ವತಗಳೆಲ್ಲವೂ ಮಾಯವಾಗಿದ್ದುವು. ಕಪ್ಪು ಸಮುದ್ರ ಮತ್ತು ಕೇಸ್ಪಿಯನ್ ಸಮುದ್ರಗಳನ್ನು ಒಂದು ದೊಡ್ಡ ಕಾಲುವೆ ಜೋಡಿಸಿತ್ತು. ಸಿಂಧು ಗಂಗಾನದಿಗಳನ್ನು ಬೇರೊಂದು ಕಾಲುವೆ ಒಂದುಗೂಡಿಸಿತ್ತು. ಸಿಂಧೂ ನದಿಯಿಂದ ಹೊರಟ ಬೇರೊಂದು ಕಾಲುವೆ ನರ್ಮದೆಯನ್ನು ಸೇರಿತ್ತು. ಆದರೆ ಆ ಕಾಲದಲ್ಲಿ ನರ್ಮದೆ ಇರಲಿಲ್ಲ. ಅದರ ಬದಲು ಪೂರ್ವ ಪಶ್ಚಿಮ ಸಮುದ್ರ ಗಳನ್ನು ಒಂದು ಗೂಡಿಸುವ ಒಂದು ಹಿರಿಯ ಕಾಲುವೆ ನೆಲಸಿತ್ತು. ಗಂಗಾ ಸಿಂಧೂ ಬಯಲುಗಳಲ್ಲಿ ದೊಡ್ಡ ನೌಕೆಗಳಿಗೆ ಸಂಚರಿಸಲು ಯೋಗ್ಯವಾದ ನೂರಾರು ಕಾಲುವೆಗಳಿದ್ದುವು. ದಕ್ಷಿಣದಲ್ಲಿ ಗೋದಾವರಿ, ಕೃಷ್ಣಾ, ಕಾವೇರಿ

ಗಳನ್ನು ಒಂದುಗೂಡಿಸುವ ಹತ್ತಾರು ಕಾಲುವೆಗಳು ಹರಿಯುತ್ತಿದ್ದುವು. ಕಾಲುವೆಗಳ ಹೆಚ್ಚಳದಿಂದ ಆ ಕಾಲದ ಜನರು ನೆಲದಾರಿಗಳಿಗಿಂತಲೂ ಜಲದಾರಿಗಳನ್ನು ಬಳಸುತ್ತಿದ್ದರೆಂದು ನನಗೆ ಅರಿವಾಯಿತು. ಬೇರೊಂದು ಪಟ ಪ್ರಪಂಚದ ನೆಲದಾರಿಗಳನ್ನು ತೋರಿಸುತಿದ್ದಿತು. ಕಾಲುವೆಗಳು ನೆಲದಾರಿಗಳನ್ನು ಪೂರ್ತಿಯಾಗಿ ನಾಶಪಡಿಸಿರಲಿಲ್ಲ. ಹಲ ಕೆಲ ನೆಲದಾರಿಗಳು ಆಗಲೂ ಉಳಿದಿದ್ದುವು. ಒಂದು ಹೆದ್ದಾರಿ ಪೂರ್ವದ ಶಾಂಗ್ಹಾಯಿಯಿಂದ ಹೊರಟು ಚೀನ ತಿಬೆಟ್ಟುಗಳನ್ನು ಹಾದು, ಸೈಬೀರಿಯಾದ ಬಯಲು ಪ್ರದೇಶಗಳನ್ನು ದಾಟಿ, ಯುರೋಪುಖಂಡದಲ್ಲಿ ಪ್ರವೇಶಿಸಿ ಫ್ರಾನ್ಸಿನ ಕರೆಯನ್ನು ಸೇರಿತ್ತು. ಎರಡನೆಯ ದಾರಿ ಕನ್ಯಾಕುಮಾರಿಯಿಂದ ಹೊರಟು ಪಾಮೀರ ಪ್ರಸ್ಥಭೂಮಿಯನ್ನು ಸೇರಿ, ಅಲ್ಲಿಂದ ಉತ್ತರಧ್ರುವಕ್ಕೆ ಮುಂದುವರಿದಿದ್ದಿತು. ಮೂರನೆಯ ದಾರಿ ಉತ್ತರ ಮತ್ತು ದಕ್ಷಿಣ ಆಫ್ರಿಕಗಳಲ್ಲಿ ಹೆಬ್ಬಾವಿನಂತೆ ಬಿದ್ದುಕೊಂಡಿತ್ತು. ಈ ಮೂರು ಮುಖ್ಯವಾದ ಹೆದ್ದಾರಿಗಳಲ್ಲದೆ ನಗರಗಳನ್ನು ಸೇರಿಸುವ ಸಾವಿರಾರು ದಾರಿಗಳಿದ್ದುವು. ಮೂರನೆಯ ಪಟ ಆಕಾಶದಾರಿಗಳನ್ನು ಸೂಚಿಸುತಿದ್ದಿತು. ಶಾಂತಸಾಗರದ ಪಶ್ಚಿಮ ತೀರದಿಂದ ಪೂರ್ವ ತೀರಕ್ಕೆ ಪ್ರತಿದಿನವೂ ಪ್ರಪಂಚವನ್ನು ಬಳಸಿಕೊಂಡು ವಿಮಾನಗಳು ಹಾರುತಿದ್ದುವು. ಒಂದು ಲಕ್ಷಕ್ಕಿಂತ ಹೆಚ್ಚು ಜನಸಂಖ್ಯೆಯುಳ್ಳ ಪ್ರತಿಯೊಂದು ನಗರದಲ್ಲಿಯೂ ಒಂದೊಂದು ವಿಮಾನ ನಿಲ್ದಾಣಗಳಿದ್ದುವು. ಒಳದೇಶ ಸಂಚಾರಕ್ಕೆ ನೌಕೆಗಳನ್ನು ವಿಶೇಷವಾಗಿ ಬಳಸುತಿದ್ದರು. ಆದರೆ ಕಡಲುಗಳಲ್ಲಿ ಹಡಗುಗಳ ಸಂಚಾರ ವಿರಳವಾಗಿದ್ದಿತು.

ಬೇರೊಂದು ಪಟದಲ್ಲಿ ಭೂಗರ್ಭದಲ್ಲಿ ಅಡಗಿದ್ದ ಖನಿಜಗಳನ್ನು ಗುರುತಿಸಿದ್ದರು. ಕಲ್ಲಿದ್ದಲಿನ ಆಗರವೆನಿಸಿದ ಇಂಗ್ಲೆಂಡಿನ ಕನಿಗಳೆಲ್ಲ ಆ ಕಾಲದಲ್ಲಿ ಬರಿಯವಾಗಿದ್ದುವು. ಅಮೇರಿಕದ ಎಣ್ಣೆ ಭಾವಿಗಳಾದರೂ ಬತ್ತಿ ಹೋಗಿದ್ದುವು. ನಾರ್ವೆ ಮತ್ತು ರೂಹರ್ ಪ್ರಾಂತಗಳ ಕಬ್ಬಿಣದ ಅಮದುಗಳು ನಮಾವಶೇಷವಾಗಿದ್ದುವು. ಪೂರ್ವಯುರೋಪು ಮತ್ತು ಪಶ್ಚಿಮ ಆಸ್ಯಗಳಲ್ಲಿನ ಖನಿಜ ಭಂಡಾರ ಮಾತ್ರ ಇನ್ನೂ ಕೊನೆಗೊಂಡಿರಲಿಲ್ಲ. ತಿಬೆಟ್, ಪಶ್ಚಿಮಚೀನ, ಬ್ರಹ್ಮಪುತ್ರಾನದಿಯ ಕಪ್ಪಲು ಈ ಎಡೆಗಳಲ್ಲಿ ಕಲ್ಲಿದ್ದಲು ಪೆಟ್ರೋಲುಗಳ ಭಂಡಾರಗಳು ದೊರಕಿದ್ದುವು. ಆದರೆ ನಮ್ಮ ಕಾಲದಂತೆ ಕನಿಗಳನ್ನು ತೋಡಿ, ಇಲ್ಲವೇ ಬಾವಿಗಳನ್ನು ತೋಡಿ ಕಲ್ಲಿದ್ದಲು ಎಣ್ಣೆಗಳನ್ನು ತೆಗೆಯುತಿರಲಿಲ್ಲ. ಆರೇಳು ಸಾವಿರ ಅಡಿಗಳ ಆಳದಲ್ಲಿಹ ಕಲ್ಲಿದ್ದಲು ಮತ್ತು ಎಣ್ಣೆಗಳನ್ನು

ಯಂತ್ರಗಳ ಮೂಲಕ ಶಕ್ತಿಯಾಗಿ ಪರಿವರ್ತಿಸಿ, ಆ ಪ್ರದೇಶಗಳಲ್ಲಿನ ಬೇಸಾಯಕ್ಕೂ, ಕೈಗಾರಿಕೆಗಳಿಗೂ ಬಳಸಿಕೊಳ್ಳುತ್ತಿದ್ದರು.

ಸೂರ್ಯನ ಶಾಖವನ್ನು ಶಕ್ತಿಯಾಗಿ ಮಾರ್ಪಡಿಸುವ ವಿಧಾನವನ್ನು ವಿಜ್ಞಾನಿಗಳು ಅರಿತ ಮೇಲೆ, ಭೂಮಿಯೊಳಗೆ ಹುದುಗಿಕೊಂಡಿರುವ ಶಕ್ತಿಯ ಭಂಡಾರಗಳು ಬತ್ತಿಹೋಗಬಹುದೆಂಬ ಭಯ ವಿಜ್ಞಾನಿಗಳಿಗೆ ಇಲ್ಲವಾಯಿತು. ಏಳನೇ ಶತಮಾನದ ಅನಂತರ ಖನಿಜಶೋಧನೆಗೆ ವಿಜ್ಞಾನಿಗಳು ಹೆಚ್ಚಿನ ಪ್ರಾಧಾನ್ಯವನ್ನು ನೀಡಲಿಲ್ಲ. ಪರಮಾಣು ಶಕ್ತಿಯ ಉಪಯೋಗವಾದರೂ ಕಡಿಮೆಯಾಗುತ್ತ ಬಂತು. ಸೂರ್ಯಕಿರಣಗಳನ್ನು ಸೆರೆಹಿಡಿದು ಶಕ್ತಿಯನ್ನು ಉತ್ಪಾದಿಸುವುದೇ ಅಂದಿನ ಸಂಪ್ರದಾಯವಾಯಿತು. ಬಗೆಬಗೆಯ ಯಂತ್ರಗಳನ್ನು ನಡೆಸಲು, ಬೆಳಕುಗಳನ್ನು ನೀಡಲು ಈ ಬಗೆಯ ಶಕ್ತಿಯನ್ನೆ ವಿನಿಯೋಗಿಸುತ್ತಿದ್ದರು. ಸೂರ್ಯಕಿರಣಗಳನ್ನು ಸೆರೆಹಿಡಿದು ಶಕ್ತಿ ಉತ್ಪಾದನೆ ಮಾಡಬಲ್ಲ ಬೃಹದ್ಯಂತ್ರಗಳನ್ನು ವಿಮಾನಕ್ಕೆ ಜೋಡಿಸುವುದು ಅಸಾಧ್ಯವಾದುದರಿಂದ, ವಿಮಾನಗಳಿಗೆ ಮಾತ್ರ ಪರಮಾಣು ಶಕ್ತಿಯನ್ನು ಉಪಯೋಗಿಸುತ್ತಿದ್ದರು. ಆ ಸಲುವಾಗಿ ಯುರೇನಿಯಂ, ರೇಡಿಯಂ ಮೊದಲಾದ ಲೋಹಗಳನ್ನು ಕಂಡುಹಿಡಿಯುವುದರಲ್ಲಿ ಭೂಶೋಧನೆ ನಡೆಸುತ್ತಿದ್ದರು.

ಮಾಧ್ಯಮಿಕ ಶಿಕ್ಷಣದ ಕಾಲಾವಧಿ ಎಂಟು ವರ್ಷಗಳ ತನಕ. ಈ ಕಾಲಾವಧಿಯಲ್ಲಿ ವಿದ್ಯಾರ್ಥಿಗಳು ಯಂತ್ರವಿಜ್ಞಾನ, ಭೂಶಾಸ್ತ್ರ, ಸಮಾಜಶಾಸ್ತ್ರ, ಒಂದೆರಡು ಬಗೆಯ ದುಡಿಮೆಗಳು ಇವುಗಳಲ್ಲಿ ಪರಿಣತರಾಗುತ್ತಿದ್ದರು. ಈ ಶಿಕ್ಷಣ ಕ್ರಮ ಮುಗಿದ ಮೇಲೆ ವಿಜ್ಞಾನಿಗಳು ಬುದ್ಧಿಮಾಪನ ಯಂತ್ರಗಳಿಂದ ವಿದ್ಯಾರ್ಥಿಗಳ ಬುದ್ಧಿಬಲವನ್ನು ಪರಿಶೋಧಿಸುತ್ತಿದ್ದರು. ಉತ್ಕೃಷ್ಟ ಬುದ್ಧಿಯವರನ್ನು ವೈಜ್ಞಾನಿಕ ಶಿಕ್ಷಣಕ್ಕೂ, ಎರಡನೆ ನೆಲೆಯವರನ್ನು ಸಮಾಜದ ಆಡಳಿತವನ್ನು ನಿರ್ವಹಿಸಲೂ, ಮೂರನೆಯ ಮಟ್ಟದವರನ್ನು ಯಂತ್ರ ಚಾಲಕರು ಮೊದಲಾದ ತಜ್ಞ ಕೆಲಸಗಾರರಾಗಿಯೂ ಆರಿಸುತ್ತಿದ್ದರು. ಇವರಿಗೆ ಹದಿನೈದು ವರುಷಗಳಿಂದ ಎಂಟು ವರುಷಗಳವರೆಗೆ ಆಯಾ ವಿಭಾಗಗಳಲ್ಲಿ ಉತ್ತಮ ಶಿಕ್ಷಣ ಕೊಡುತ್ತಿದ್ದರು. ಇಲ್ಲಿ ಅವರು ಅಕ್ಷರಾಭ್ಯಾಸ ಮಾಡಬೇಕಾಗುತ್ತಿದ್ದಿತು; ವಿವಿಧ ಗ್ರಂಥಗಳನ್ನು ಓದಿ ತಿಳಿದುಕೊಳ್ಳಬೇಕಾಗುವುದು. ಇವರಲ್ಲಿ ವಿಜ್ಞಾನಿಗಳೇ ಸಮಾಜದ ಮಿದುಳು; ಆಡಳಿತಗಾರರೇ ಸಮಾಜ ಪುರುಷನ ರಕ್ತನಾಳಗಳು, ನುರಿತ ಕೆಲಸಗಾರರೇ ಕೈಕಾಲು ಮತ್ತು ವಿವಿಧ ಅಂಗಗಳು.

ಈ ಮೂರು ಗುಂಪಿಗೂ ಸೇರದ ಜನಸಾಮಾನ್ಯರು ಇದ್ದರು. ಅವರು ಜನಸಂಖ್ಯೆಯಲ್ಲಿ ನೂರಕ್ಕೆ ನಲವತ್ತರಂತೆ ಇರುವರು. ಇವರಿಗೆ ವಿಶೇಷವಾದ ಹೊಣೆಗಾರಿಕೆ ಏನೂ ಇರಲಿಲ್ಲ. ವಾರದಲ್ಲಿ ಎರಡು ಸಲ ವ್ಯವಸಾಯ, ಕೈಗಾರಿಕೆ ಮೊದಲಾದ ಉತ್ಪಾದನಾಕ್ಷೇತ್ರಗಳಿಗೆ ಹೋಗಿ, ನಾಲ್ಕು ತಾಸು ದುಡಿಯುವುದೇ ಅವರ ಕೆಲಸ.

ಶಿಕ್ಷಣ ಮಂದಿರದ ವಿವಿಧ ಭಾಗಗಳನ್ನು ನೋಡಿ ಮುಗಿಸಿಯಾಯಿತು. ನಾನು ಶಿಕ್ಷಣ ವಿಭಾಗದ ಮುಖ್ಯಾಧಿಕಾರಿಗೆ ವಂದಿಸಿ ಅಲ್ಲಿಂದ ಮರಳಿದೆ. ನನ್ನ ಬೆನ್ನ ಹಿಂದೆಯೇ ನಾಗರ, ಮೀನಾ ಇವರು ಇದ್ದರು.

೬

"ನಿಮ್ಮ ಊರಲ್ಲಿ ಮಕ್ಕಳನ್ನು ಕಾಣುವುದೇ ಇಲ್ಲವಲ್ಲ!" ನಾನು ಉಸುರಿದೆ. "ನೀವು ಬೇರೆ ಬೇರೆಯಾಗಿದ್ದುಕೊಂಡು ಸಂಸಾರ ಮಾಡುವುದಿಲ್ಲವೇನು?"

"ಮಕ್ಕಳ ಆರೈಕೆ ಪೋಷಣೆಗಳನ್ನು ಸಮಾಜವೇ ನೋಡಿಕೊಳ್ಳುತ್ತದೆ. ಬದುಕಿ ಬಾಳಲು ಪ್ರತಿಯೊಬ್ಬನಿಗೂ ಒಂದೇ ಬಗೆಯ ಅವಕಾಶವಿರಬೇಕೆಂದು ನಮ್ಮ ವಿಜ್ಞಾನಿಗಳ ಹಂಚಿಕೆ. ಆದುದರಿಂದ ಪ್ರತಿಯೊಂದು ನಗರದಲ್ಲಿಯೂ ಶಿಶುರಕ್ಷಣಾಲಯವನ್ನು ತೆರೆದಿದ್ದಾರೆ. ಶಿಶುಕೇಂದ್ರದಲ್ಲಿ ಜನ್ಮ ತಳೆದ ಮಗು ನಾಲ್ಕೈದು ವರುಷಗಳ ತನಕ ಇದ್ದು, ಅಲ್ಲಿಂದ ಪ್ರಾಥಮಿಕ ವಿದ್ಯಾಮಂದಿರಕ್ಕೆ ತೆರಳುತ್ತದೆ; ಅನಂತರ ಮಾಧ್ಯಮಿಕ ಶಿಕ್ಷಣವನ್ನು ಮುಗಿಸುತ್ತದೆ. ಅದು ಹೊರಗಿನ ಪ್ರಪಂಚದ ಬೆಳಕನ್ನು ಕಾಣಬೇಕಾದರೆ ಕನಿಷ್ಠ ಪಕ್ಷ ಹದಿನೆಂಟು ವರುಷಗಳಾದರೂ ಆಗಬೇಕು."

"ತಂದೆ ತಾಯಿಗಳಿಗೆ ಮಗುವಿನೊಡನೆ ಇರುವ ಸಂಪರ್ಕವೇ ತಪ್ಪಿ ಹೋಗುವುದಲ್ಲ." ನಾನು ವಿಸ್ಮಯದಿಂದ ಪ್ರಶ್ನಿಸಿದೆ. "ಹದಿನೆಂಟು ವರುಷಗಳ ಅನಂತರ ಆ ಮಗು ಹೇಗೆ ತಾಯಿ-ತಂದೆಗಳನ್ನು ಗುರುತಿಸಬಲ್ಲುದು?"

"ಮಗು ತನ್ನನ್ನು ಹೆತ್ತವರನ್ನು ಗುರುತಿಸಬೇಕಾದ ಅಗತ್ಯವೇ ಇಲ್ಲ." ನಾಗರ ಮರುನುಡಿದ. "ನಮ್ಮ ಪಾಡಿಗೆ ನಾವಿರುತ್ತೇವೆ; ಮಗುವಿನ ಪಾಡಿಗೆ ಅದು ಬೆಳೆದು ದೊಡ್ಡದಾಗುತ್ತದೆ. ತಂದೆ ಮಗ ಎಂಬ ಸಂಬಂಧ ಐನೂರು ವರುಷಗಳ ಹಿಂದಿನ ಮಾತು."

ನಾಗರನ ನುಡಿಗೇಳಿ ನನಗೆ ಸೋಜಿಗವೆನಿಸಿತು. ನಮ್ಮ ಮರಿಮಕ್ಕಳ ಕಾಲದಲ್ಲಿ ತಂದೆ ಮಕ್ಕಳ ಸಂಬಂಧವೇ ಉಳಿಯದು. ಇದು ನಾನು ವಿಚಾರಿಸದಿದ್ದ ಒಂದು ಕಲ್ಪನೆಯಾಗಿತ್ತು. ಆದರೆ ಭವಿಷ್ಯದ ಬಸಿರನ್ನು ಬಗೆದು ಹೊಕ್ಕ ನನ್ನೊಡನೆ, ನನ್ನ ಮರಿಮಗನೇ ಹೇಳಿದ ಯಥಾರ್ಥವಾಗಿದ್ದಿತು ಇದು. ತಾಯಿ ತಂದೆ, ಮಕ್ಕಳು ಈ ಪುಟ್ಟ ಎಳೆಯೊಡನೆ ಈ ಪುಟ್ಟ ಗೋಳದಲ್ಲಿ ಮಾನವ ಸಂಸ್ಕೃತಿ ಮೂಡಿತ್ತು. ಆದರೆ ನಾಗರಿಕತೆಯ ತುಂಗಶೃಂಗವನ್ನೇರಿದ ಮುಂದಿನ ಮಾನವನು ಆ ಪವಿತ್ರ ಸೂತ್ರದ ಮೇಲೆ ಕತ್ತರಿಯಾಡಿಸಿ ಮರಳಿ ಮೃಗಗಳ ಮೆಟ್ಟಲಿಗಿಳಿವನೆಂದು ನಾನು ಎಣಿಸಿರಲಿಲ್ಲ. ಆ ಮಾನವನನ್ನು ಯಾವ ಹೆಸರಿನಿಂದ ಕರೆಯಲಿ? ಪಶುವೆನಲೆ? ಯಾಂತ್ರಿಕ ಶಕ್ತಿಯನ್ನು ಅಳವಡಿಸಿದ ರಾಕ್ಷಸನೆಂದೆನಲೆ?

ಆಲೋಚನೆಯ ಮಡುವಿನಲ್ಲಿ ಮುಳುಗಿದ್ದ ನಾನು ಮಾತಾಡದಿರುವುದನ್ನು ಕಂಡು ನಾಗರನಿಗೆ ಅಚ್ಚರಿಯೆನಿಸಿತು. ನನ್ನ ಅಂತರಂಗದಲ್ಲಿದ್ದ ಭಾವ ತರಂಗಗಳು ಮೊಗದ ಮೇಲೂ ಪ್ರತಿಬಿಂಬಿಸಿರಬೇಕು. ವಿಸ್ಮಯದ ದನಿಯಲ್ಲಿ ನಾಗರ ನುಡಿದ.

"ಏನು, ಮಾತಾಡದೆ ನಿಂತಿರುವೆ?"

"ನಿನಗೆ ಸಂಸಾರವಿಲ್ಲವೇ?"

"ಸಂಸಾರ!" ನನ್ನ ನುಡಿಯನ್ನೇ ಮರಳಿ ಉಚ್ಚರಿಸಿದ. ಆ ನುಡಿಯ ಅರ್ಥವೂ ಆ ಬಡಪಾಯಿಗೆ ತಿಳಿಯದು.

"ನಿನಗೆ ಜತೆಗಾತಿಯೊಬ್ಬಳು!"

"ಹಾಗೋ." ಆತನ ದಪ್ಪದ ತುಟಿಗಳ ಮೇಲೆ ನಗೆಮಿಂಚೊಂದು ಮೂಡಿತು.

"ಅದನ್ನೇ ನಾನು ಕೇಳಿದೆ. ನಿನಗೆ ಬಾಳ ಜತೆಗಾತಿಯಿಲ್ಲವೇ?"

"ಜತೆಗಾತಿಯೊಬ್ಬಳಿರುವಳು. ಜತೆಗಾತಿಯನ್ನು ನಾವು ಇಷ್ಟ ಬಂದಾಗ ಆರಿಸಿಕೊಳ್ಳಬಹುದು. ಬೇಸರವಾದಾಗ ಬಿಡಬಹುದು."

"ಈ ಸಂಬಂಧದಲ್ಲಿ ನೀವಿಬ್ಬರೂ ಹೊರಬೇಕಾದ ಹೊಣೆಗಾರಿಕೆ ಏನೂ ಇಲ್ಲವೇ?"

"ಹೊಣೆಗಾರಿಕೆಯೇನು? ಮೆಚ್ಚಿಕೆಯಾದಾಗ ಒಂದುಗೂಡಿ ಬಾಳುತ್ತೇವೆ, ವೈದ್ಯರು ಒಪ್ಪಿದರಾಯಿತು. ಬೇಸರವೆನಿಸಿದಾಗ ನಾವು ಬೇರೆಯಾಗು

ತೇವೆ. ಆಡಳಿತಗಾರರು ಒಪ್ಪಿಸಿದ ಕೆಲಸಗಳನ್ನು ವಾರದಲ್ಲಿ ಎರಡು ದಿನ ಎಸಗುತೇವೆ. ಆಹಾರ, ವಸ್ತ್ರ, ವಿನೋದ ಮೊದಲಾದ ಎಲ್ಲ ಸೌಕರ್ಯ ಗಳನ್ನು ಆಡಳಿತಗಾರರೇ ಒದಗಿಸುತಾರೆ. ಅಲ್ಲವೇ ವಿಾನ ?''

'' ಹೂಂ.'' ಎಂದಳು ಮೀನಾ. ಗಂಡು ಹೆಣ್ಣುಗಳ ಸಂಬಂಧದ ಮಾತುಕತೆ ಆಕೆಯಲ್ಲಿ ಲಜ್ಜೆಯನ್ನು ಮೂಡಿಸಿತ್ತು. ಕಿತ್ತಳೆ ಬಣ್ಣದ ಆಕೆಯ ಕೆನ್ನೆಗಳ ಮೇಲೆ ನಾಚಿಕೆಯ ಗುಲಾಬಿ ಬಣ್ಣ ಕಳೆಯಾಡುತಿತ್ತು. ಯಾಂತ್ರಿಕ ಸಂಸ್ಕೃತಿಯ ಉಕ್ಕಿನ ಕೋಟೆಯ ನಡುವೆ ಬೆಳೆದಿದ್ದ ಆಕೆಯಲ್ಲಿ ' ಹೆಣ್ಣುತನ ' ಅಲ್ಪ ಸ್ವಲ್ಪ ಉಳಿದಿರುವುದನ್ನು ನಾನು ಕಾಣದಿರಲಿಲ್ಲ. '' ನಿನಗಾದರೂ ಈ ಬದುಕು ಒಪ್ಪುತದೆಯೇ ? ಜೀವನ ಒಂದು ಯಂತ್ರದಂತೆ ತೋರುವು ದಿಲ್ಲವೇ ? '' ಎಂದು ಆಕೆಯ ಅಂತರಂಗದಲ್ಲಿ ಹೊಗೆಯಾಡುತಿದ್ದ ಭಾವವನ್ನು ಕೆರಳಿಸಿದೆ.

'' ಹೀಗೇಕೆ ಬಾಳಬೇಕೆಂಬುದು ನನಗೆ ತಿಳಿಯುವುದಿಲ್ಲ.'' ಮೀನಾ ಹೇಳಿದಳು. '' ಭೋಜನ ಶಾಲೆಯಲ್ಲಿ ನೂರೆಂಟು ಮಂದಿಯೊಡನೆ ಉಣಬೇಕು, ಸಾರ್ವಜನಿಕ ಸಜ್ಜೆವನೆಯಲ್ಲಿ ಪವಡಿಸಬೇಕು. ಯಂತ್ರದಂತೆ ನಗರದ ಬೀದಿಗ ಳಲ್ಲಿ ಅಲೆಯುವುದು; ಆಡಳಿತಗಾರರು ಹೇಳಿದ ದಿನ ಬೇಸಾಯ ಕ್ಷೇತ್ರದಲ್ಲೋ, ಇಲ್ಲವೆ ಯಂತ್ರಶಾಲೆಯಲ್ಲೋ ದುಡಿದು ಬರುವುದು. ಈ ವಾಳ್ಕೆಗಳೆಲ್ಲ ನನಗೆ ಬೇಸರ ಹುಟ್ಟಿಸುತವೆ. ನನಗೆ ನನ್ನದೇ ಆದ ಒಂದು ವಸತಿ; ನನ್ನ ಆಹಾರ ವನ್ನು ನಾನೇ ಬೇಯಿಸಿಕೊಳ್ಳುವುದು; ಹೊತ್ತು ಕಳೆಯಲು ತೊದಲಾಡುವ ನಾಲ್ಕು ಮಂದಿ ಎಳೆಯರು: ಈ ಸೌಕರ್ಯಗಳು ಇದ್ದರೆ, ನಾನೆಷ್ಟು ಹರುಷ ವಾಗಿರುತಿದ್ದೆ !''

ಮೀನಾ ಅರಿತಿದ್ದಳೋ ಇಲ್ಲವೋ ನಾನು ಹೇಳಲಾರೆ. ಅವಳಂತು ತನಗಿಂತ ಹತ್ತು ಶತಮಾನಗಳ ಹಿಂದಿನ ಗೃಹಿಣಿಯ ಪದವಿಯನ್ನು ನೆನೆಯು ತಿದ್ದಳು.

'' ಕಾಡು ಜನರಂತೆ ಏಕೆ ಮಾತಾಡುವೆ ಮೀನಾ ? '' ಆಕೆ ಮಾತು ಮುಗಿಸುವ ಮುನ್ನ ಸಾಗರ ತುಟಿದೆರೆದ. '' ಮನುಷ್ಯ ಬೇರೆ ಬೇರೆಯಾಗಿ ಒಂದೊಂದು ಮನೆ ಮಾಡಿಕೊಂಡು ಬದುಕುತಿದ್ದಾಗ, ತನ್ನ ಮಕ್ಕಳು ಮರಿಗ ಳನ್ನು ತಾನೇ ಆರೈಕೆ ಮಾಡಿ ಬೆಳೆಸುತಿದ್ದಾಗ, ಎಷ್ಟು ದುಡಿದು ಕಷ್ಟಬಡುತಿದ್ದ ಎಂಬುದನ್ನು ನೀನು ಅರಿಯೆಯಾ ? ವಿಜ್ಞಾನಿಗಳು ಅದನ್ನು ಹೇಳುತಿದಾರೆ;

ಚಲಚಿತ್ರಗಳು ಆ ಬದುಕನ್ನು ತೋರಿಸಿಕೊಡುತಲಿವೆ. ವಿಜ್ಞಾನಿಗಳ ಕೃಪೆಯಿಂದ ನಮಗೆ ಅಂತಹ ಸಂಕಟಗಳೇನೂ ಇಲ್ಲ. ನಾವು ಎಷ್ಟು ಉಲ್ಲಾಸವಾಗಿ ಬದುಕಬಹುದು !"

"ನೀನು ಏನು ಹೇಳುತ್ತೀಯೆ ಸಾಗರ?" ಮೀನಾ ಅಂದಳು. "ಮೊನ್ನೆ ಶಿಶು ರಕ್ಷಣಾ ಮಂದಿರಕ್ಕೆ ಹೋಗಿದ್ದೆ. ಒಬ್ಬ ತಾಯಿ ತನ್ನ ಎರಡು ವರುಷದ ಕೂಸನ್ನು ಬಿಟ್ಟು ಬರಬೇಕಾಯಿತು. ವ್ಯಸನದಿಂದ ಆಕೆಯ ಮೋರೆ ಕಂದಿಹೋಗಿದ್ದಿತು. ಮರಳಿ ಆ ಕೂಸಿನ ಮೊಗ ನೋಡಿ ಅದು ತನ್ನದೆಂದು ಗುರತಿಸುವಂತಿಲ್ಲ."

"ಏಕೆ, ತನಗೆ ಬಿಡುವಾದಾಗ ಹೋಗಿ ಕೂಸನ್ನು ನೋಡಿಕೊಂಡು ಬರಬಾರದೇ?" ಅವರೀರ್ವರ ಮಾತುಕತೆಗಳನ್ನು ಕೇಳುತಲಿದ್ದ ನಾನು ನಡುವೆ ಬಾಯಿ ಹಾಕಿದೆ.

"ಹೋಗಿ ನೋಡಬಹುದು. ಆದರೆ ಇಷ್ಟ ಬಂದಾಗಲೆಲ್ಲ ಕೂಸನ್ನು ಹೋಗಿ ನೋಡಲು ಅಧಿಕಾರಿಗಳು ಬಿಡುವುದಿಲ್ಲ. ಆರು ತಿಂಗಳಿಗೊಮ್ಮೆ ತಾಯಿಗೆ ಅವರು ಅನುಮತಿಯನ್ನು ದಯಪಾಲಿಸುತಾರೆ. ಈ ಅಂತರದಲ್ಲಿ ಶಿಶು ಬಳೆದು ಎಷ್ಟೋ ಬದಲಾಯಿಸಿರುತದೆ. ಮಗುವಿಗೆ ಹೆಸರಿಡುವವರೂ ಶಿಶುರಕ್ಷಣಾಲಯದ ಅಧಿಕಾರಿಗಳೇ. ತಾಯಿ ಎರಡನೆ ಸಲ ಹೋದಾಗ ತಾನು ಹೆತ್ತ ಮಗುವನ್ನೇ ಮುದ್ದಾಡುತಿರುವೆನೆಂಬ ಭರವಸೆ ಇಲ್ಲ."

"ಮಕ್ಕಳೆಲ್ಲ ವಿಶ್ವಜನಾಂಗದ ಸಂಪತ್ತುಗಳು." ಸಾಗರ ನುಡಿದ. "ನಾವಾವರೂ ಆ ವಿಶ್ವಜನಾಂಗದ ರಕ್ತಕಣಗಳು. ತಾಯಿ ಯಾವ ಮಗುವನ್ನು ಮುದ್ದಾಡಿದರೇನು? ಅದು ತನ್ನ ಕೂಸನ್ನೇ ಲಲ್ಲೆಗೈದಂತೆ ಸರಿ."

"ಸಾಗರ, ಸುಮ್ಮನೆ ಹರಟಬೇಡ. ನೀನು ತಾಯ್ತನದ ಆಳವನ್ನು ಕಂಡರಿಯೆ. ನಿನ್ನ ಕಣ್ಣುಗಳಿಗೆ ಕೂಸುಗಳೆಲ್ಲ ಒಂದೇ ಎಂದು ತೋರುತ್ತವೆ." ಮೀನಳ ಕಣ್ಣುಗಳಲ್ಲಿ ಹನಿಗಳು ನೆರೆದಿದ್ದುವು. "ನಾನು ಮಕ್ಕಳನ್ನು ಹಡೆದಿಲ್ಲ. ಆದರೆ ತಾಯಿಕರುಳು ಎಂತಹುದೆಂಬುದನ್ನು ಬಲ್ಲೆ; ಕೂಸನ್ನು ಅಗಲಿದ ಆ ತಾಯಿಯ ನೋವನ್ನು ಎಂದಿಗೂ ಮರೆಯೆನು. ನಾನೊಬ್ಬ ತಾಯಿಯಾಗಲು ಏಕೆ ಒಪ್ಪಲಿಲ್ಲ ಗೊತ್ತೇ?"

"ಏಕೆ?" ಸಾಗರ ಆಕೆಯ ಮೊಗದತ್ತ ಕಣ್ಣುಗಳನ್ನು ಹೊರಳಿಸಿದ.

"ಬೇನೆಯನ್ನುಂಡು ಪಡೆದ ಹಸುಳೆಯನ್ನು ಎಂದಿಗೂ ಶಿಶುರಕ್ಷಣಾಲಯದವರ ಕೈಗೆ ಒಪ್ಪಿಸೆನು. ಆದುದರಿಂದಲೇ ನಾನು ತಾಯಿಯಾಗೆನು."

"ಹುಚ್ಚು ಹುಡುಗಿ; ನೀನು ಬಹಳ ಭಾವಜೀವಿ. ಹಳೆಯ ಅಜ್ಜಿಗಳಂತೆ ಮಾತಾಡುತ್ತಾಳೆ." ಸಾಗರ ಉಸುರಿದ. "ಭಾವವೆಂದರೆ ಮನಸಿನಲ್ಲಿ ಮೂಡುವ ಯಥಾರ್ಥಕ್ಕೆ ಸಂಬಂಧವಿಲ್ಲದ ಆಲೋಚನೆಗಳು. ಅವುಗಳಿಂದ ಕಿಂಚಿತ್ತು ಪ್ರಯೋಜನವಿಲ್ಲ. ಭಾವನೆಗಳ ಆಕಾಶದಲ್ಲಿ ಹೆಚ್ಚು ಹಾರಾಡುವುದು ಅನಾರೋಗ್ಯದ ಲಕ್ಷಣ. ಮೀನಾ, ನಿನ್ನ ಆರೋಗ್ಯ ತುಸು ಕೆಟ್ಟಿರಬೇಕು. ನೀನು ಮನೋವೈದ್ಯರ ಬಳಿಗೆ ತೆರಳುವುದು ಲೇಸು."

"ನಿನ್ನ ಮನೋವೈದ್ಯರ ಮೋಗಕ್ಕೆ ಬೆಂಕಿ ಬೀಳಲಿ!" ಸಿಡುಕು ದನಿಯಲ್ಲಿ ಮೀನಾ ಮಾರ್ನುಡಿದಳು. "ಈ ವಿಜ್ಞಾನಿಗಳ, ಈ ವೈದ್ಯರ ಹೆಸರು ಕೇಳಿ ಕೇಳಿ ನನಗೆ ತಲೆನೋವು ಬಂದಿದೆ."

"ವಿಜ್ಞಾನಿಗಳನ್ನು ನಿಂದಿಸುವುದು ಕಾನೂನಿಗೆ ವಿರೋಧ."

ನಾನು ನಡುವೆ ಬಾಯಿ ಹಾಕದಿದ್ದರೆ ಅವರ ಚರ್ಚೆ ಕೊನೆಯಿಲ್ಲದೆ ಸಾಗುತ್ತಿತ್ತು. ಆದುದರಿಂದ ನಾನು ಹೇಳಿದೆ. "ಸಾಗರ, ನಿನಗೆ ಬಿಡುವು ತಾನೆ?"

"ಇಂದು ಮಾತ್ರವಲ್ಲ. ಮೂರು ನಾಲ್ಕು ದಿನಗಳ ತನಕ ಬಿಡುವೇ."

"ನನ್ನೊಡನೆ ಬಾ. ಶಿಶುರಕ್ಷಣಾಲಯವನ್ನು ನೋಡಬೇಕೆಂದು ನನ್ನ ಮನದಾಸೆ."

"ಅಲ್ಲೇನು ನೋಡಲಿಕ್ಕೆ ಇದೆ? ಬಾ, ಉದ್ಯಾನಕ್ಕೆ ಹೋಗೋಣ. ಶಿಶುರಕ್ಷಣಾಲಯದಲ್ಲಿ ನೋಡಲೇನಿದೆ? ಅಲ್ಲಿನ ದಾದಿಯರ ಸೊಟ್ಟ ಮೊಗಗಳನ್ನೇ? ಅಲ್ಲಿ ಚೀರಿ ಕಿವಿಗಳನ್ನು [illegible]ಪ್ರತಾಗಿಸುವ ಹಸುಳೆಗಳನ್ನೇ!" ಶಿಶುಮಂದಿರಕ್ಕೆ ನನ್ನ ಸಂಗಡ ಬರಲು ಸಾಗರ ವಿಸಮ್ಮತಿಯನ್ನು ಸೂಚಿಸಿದ.

"ಮಣ್ಣು ಹಾಕಲಿ ನಿನ್ನ ಉದ್ಯಾನಕ್ಕೆ! ಅಲ್ಲೇನು ಮಹಾವಿಚಿತ್ರವಿದೆ? ರಂಗಿನ ಬೆಳಕುಗಳು ಹೂಗಿಡಗಳ ಮೇಲೆ ಕಳೆಯಾಡುತ್ತಿರುವಾಗ, ನೀವು ಹೆಣ್ಣು ಗಂಡು ಕೈ ಕೈ ಹಿಡಿದು, ಮೈಗಳು ದಣಿದು ಸೋಲುವತನಕ ಕುಣಿವುದಲ್ಲದೆ ಅಲ್ಲಿ ನಿಮಗೇನು ಬೇರೆ ಕೆಲಸವಿದೆ? ಶಿಶುಮಂದಿರದಲ್ಲಿ ಹಾಗಲ್ಲ. ಆ ಮುದ್ದು ಗೂಸುಗಳನ್ನು ಕಾಣುವಾಗಲೇ ಕಣ್ಣುಗಳು ತಣಿಯುತ್ತವೆ; ಎದೆ ಹಿಗ್ಗುತ್ತದೆ. ನನಗಂತೂ ಹಸುಳೆಗಳನ್ನು ಹಿಡಿದೆತ್ತಿ ಎದೆಗೆ ಅಪ್ಪಿಕೊಳ್ಳ

ಬೇಕೆಂದೆನಿಸುತ್ತದೆ.'' ಮೀನಾ ಅಂದಳು. '' ನಾಗರ ಬರದಿದ್ದರ ಹೋಗಲಿ. ನಾನು ನಿನ್ನ ಸಂಗಡ ಬರುವೆನು. ''

'' ನಾನು ಬರುವುದಿಲ್ಲ. ಉದ್ಯಾನಕ್ಕ ಬಂದರೆ ಅಲ್ಲಿ ನಿನ್ನ ಕಾಣೋಣವಂತೆ'' ಎಂದು ಉಸುರಿದ ನಾಗರ.

ನಾನು ನಾಗರನನ್ನು ಬೀಳ್ಕೊಟ್ಟೆ. ''ನೀನು ಉದ್ಯಾನಕ್ಕ ಬರಲು ಮರೆಯಬೇಡ.'' ಎಂದು ಮರಳಿ ಹೇಳುತ್ತಾ ತನ್ನ ಹಾದಿ ಹಿಡಿದ. '' ಶಿಶುರಕ್ಷಣಾಲಯಕ್ಕೆ ಹೋಗಬೇಕಾದರ ದೋಣಿ ಹಿಡಿಯಬೇಕೆ ? '' ನಾನು ಮೀನಳನ್ನು ಪ್ರಶ್ನಿಸಿದೆ.

'' ಊಹೂಂ. '' ಮೀನಾ ತಲೆಯನ್ನು ಅಲುಗಿಸಿದಳು. '' ಈ ದಾರಿಗಾಗಿ ಬಿಂಗಾಮ್ ಬರಲಿದೆ. ಅದರಲ್ಲಿ ಹೋಗುವಾ. ಶಿಶುಮಂದಿರಕ್ಕೆ ಜಲದಾರಿಯಿಲ್ಲ. ''

'' ಬಿಂಗಾಮು ಅಂದರೇನು ? ಆಕಾಶದಲ್ಲಿ ಸಂಚರಿಸುವ ಒಂದು ವಾಹನವೇ ? ''

'' ಅಲ್ಲ, ಅದು ನೆಲದ ಮೇಲೆಯೇ ಓಡುತ್ತದೆ. ''

ನಮ್ಮ ಮೋಟಾರುಕಾರು ಬಸ್ಸುಗಳ ಬಗೆಯ ಒಂದು ವಾಹನವಿರಬಹುದು, ಇಲ್ಲವೆ ರೈಲುಗಾಡಿ ಟ್ರಾಮುಗಳ ಮಾದರಿಯದಿರಬಹುದು ಎಂದು ನನ್ನ ಊಹೆಯಾಗಿತ್ತು.

'' ಬಾ. ಇಲ್ಲಿ ಬಿಂಗಾಮು ನಿಲ್ಲುವುದಿಲ್ಲ. ಅದು ನಿಲ್ಲುವೆಡೆಗೆ ಹೋಗುವಾ'' ಎಂದಳು ಮೀನಾ.

ನಾನು ಆಕೆಯನ್ನು ಅನುಸರಿಸಿದೆ. ನೂರು ಗಜ ದೂರ ಹೋಗುವುದರೊಳಗಾಗಿ ನಾಲ್ಕು ದಾರಿಗಳು ಬಂದು ಸೇರುವ ಒಂದೆಡೆಗೆ ಬಂದೆವು. ಅಲ್ಲಿ ಒಂದು ದೊಡ್ಡ ಕರಿಹಲಗೆಯನ್ನು ಒಂದು ಕಂಬದ ಮೇಲೆ ತೂಗುಹಾಕಿದ್ದರು. ಅದರ ಮೇಲೆ ಒಂದು ದೊಡ್ಡ ಮನೆಯ ಚಿತ್ರವಿತ್ತು.

'' ಇದೇನು ? ಮನೆಯ ಚಿತ್ರ ಬರೆದು ನೇತು ಹಾಕಿದಾರೆ? '' ಅಚ್ಚರಿಯಿಂದ ನಾನು ನುಡಿದೆ.

'' ಅದು ಮನೆಯಲ್ಲ, ಬಿಂಗಾಮು! '' ನನ್ನ ಅರಿವುಗೇಡನ್ನು ನೋಡಿ ಮೀನಾ ಗೊಳ್ಳೆಂದು ನಕ್ಕಳು. '' ಇಂತಹ ವಾಹನಗಳನ್ನೇ ನಾವು ನೆಲದ

ಮೇಲೆ ಬಳಸುತಿರುವೆವು. ಕೆಲ ನಿಮಿಷ ಇಲ್ಲಿ ಕಾದಿರು. ಆ ವಾಹನವನ್ನು ನೀನು ಕಣ್ಣಾರೆ ಕಾಣುವಿಯಂತೆ!''

ಅಲ್ಲಿ ನಿರ್ಮಿಸಿದ್ದ ಅಮೃತ ಶಿಲೆಯ ಆಸನಗಳ ಮೇಲೆ ಕುಳಿತೆವು. ಹತ್ತು ನಿಮಿಷ ಕಳೆವುದರೊಳಗಾಗಿ ಮೀನಾ ಹೇಳಿದ ಬಿಂಗಾಮು ಬಂದಿತು. ಅದು ಬೃಹದಾಕಾರವನ್ನು ತಳೆದ ಮೋಟಾರುಕಾರು ಎಂದರೂ ಸಲ್ಲುವುದು. ಅದು ಸುಮಾರು ನಲವತ್ತು ಅಡಿ ಉದ್ದವಾಗಿತ್ತು. ಒಂದರ ಮೇಲೆ ಇನ್ನೊಂದರಂತೆ ಮೂರು ಅಂತಸ್ತುಗಳಿದ್ದುವು. ಅಂತಸ್ತುಗಳಿಗೆ ಏರಲೂ ಇಳಿಯಲೂ ಬೇರೆ ಬೇರೆಯಾದ ಏಣಿಗಳಿದ್ದುವು. ಕುಳಿತುಕೊಳ್ಳಲು ಸೊಗಸಾದ ಸೀಟುಗಳು. ಪ್ರತಿಯೊಂದು ನೆಲೆಯಲ್ಲಿಯೂ ಏನಿಲ್ಲೆಂದರೂ ಒಂದು ನೂರು ಮಂದಿ ಕುಳ್ಳಿರ ಬಹುದು. ವಾಹನದ ಚಾಲನೆಗೆ ಮೋಟಾರಿನಂತೆ ಡ್ರೈವರನ ಅಗತ್ಯತೆ ಇರಲಿಲ್ಲ. ಯಾಂತ್ರಿಕ ಶಕ್ತಿಯಿಂದ ತನ್ನಷ್ಟಕ್ಕೆ ತಾನೇ ಚಲಿಸುತಿದ್ದಿತು; ಗೊತ್ತಾದ ಹಲವು ಎಡೆಗಳಲ್ಲಿ ಕ್ಷಣಕಾಲ ನಿಲ್ಲುತಿದ್ದಿತು; ನಿಶ್ಚಿತ ಸಮಯ ಕಳೆಯಲು ಮರಳಿ ಚಲಿಸುತಿದ್ದಿತು. ನಮ್ಮಂತೆಯೇ ಹತ್ತಾರು ಮಂದಿ ಆ ಎಡೆಯಲ್ಲಿ ಬಿಂಗಾಮಿನ ಆಗಮನವನ್ನು ಇದಿರು ನೋಡುತಿದ್ದರು. ನಾವೆಲ್ಲರೂ ಹತ್ತಿ ವಾಹನದಲ್ಲಿ ಕುಳಿತೆವು. ಎರಡು ನಿಮಿಷಗಳ ಅನಂತರ ಗಾಡಿ ಮರಳಿ ಚಲಿಸಿತು. ನಮ್ಮ ಬಸ್ಸು ರೈಲುಗಳಂತೆ ಅದು ಅಲುಗುತಿರಲಿಲ್ಲ; ಸದ್ದಾಗುತಿರಲಿಲ್ಲ; ನೀರವವಾಗಿ ಅದು ಮುಂದೆ ಸಾಗುತಿದ್ದಿತು. ನಾನು ಇಲ್ಲಿ ಕುರ್ಚಿಯ ಮೇಲೆ ಕುಳಿತಷ್ಟು ಹಾಯಾಗಿದ್ದೆ.

ನನ್ನ ವೇಷಭೂಷಣಗಳು ಅವರದಕ್ಕಿಂತಲೂ ವಿಭಿನ್ನವಾದುದರಿಂದ, ಅವರೆಲ್ಲರ ದೃಷ್ಟಿಗಳೂ ನನ್ನ ಕಡೆಗೆ ಹೊರಳಿದುವು. ಎಲ್ಲರೂ ಎವೆಮಿಸುಕದೆ ನನ್ನನ್ನು ದಿಟ್ಟಿಸುತಿದ್ದರು. "ಈತ ಯಾರು?" ಎಂದು ಹತ್ತಾರು ಮಂದಿ ಇಲ್ಲಿಯೂ ಮೀನಳನ್ನು ಪೀಡಿಸದಿರಲಿಲ್ಲ. "ಗುರುಗ್ರಹದವನು." ಎಂದು ಆಕೆ ಹೇಳಿ ಸುಮ್ಮನಾದಳು.

ಪಯಣಿಗರಲ್ಲಿ ಒಬ್ಬ ನನ್ನನ್ನೇ ನಿಟ್ಟಿಸಿದ. ಅವನು ಇತರರಂತಲ್ಲ. ಆತನ ಉಡುಪಾದರೂ ವ್ಯತ್ಯಸ್ತವಾದುದು. ಹಸಿರು ಬಣ್ಣದ ಇಜಾರವನ್ನು ತೊಟ್ಟಿದ್ದ. ಅದು ನೆಲಕ್ಕೆ ಮುಟ್ಟುತಿದ್ದಿತು. ತೊಟ್ಟ ಹಸಿರು ಬಣ್ಣದ ಅಂಗಿಯಾದರೂ ಮೊಣಕಾಲವರೆಗೆ ಬಂದಿತ್ತು. ಅಂಗಿಯ ರೆಕ್ಕೆಗಳಂತಹ ಪಾರ್ಶ್ವಗಳು ಜೋತುಬಿದ್ದು ನೆಲವನ್ನು ಸ್ಪರ್ಶಿಸುತಿದ್ದುವು. ತಲೆಯ ಮೇಲೆ ಹಳದಿ

ಬಣ್ಣದ ಟೊಪ್ಪಿಗೆಯನ್ನು ಧರಿಸಿದ್ದ. ಮೂಗಿನ ಮೇಲೆ ಕನ್ನಡಕ ಮಿನುಗುತಿದ್ದಿತು. ಕೋಲ್ಮೊಗ ಆತನದು. ತೋಳುಗಳು ನಿಡಿದಾಗಿದ್ದುವು. ಆತ ನನ್ನ ಮೊಗದಲ್ಲಿ ನಟ್ಟ ಕಣ್ಣುಗಳನ್ನು ತೆಗೆಯದೆ ಹೇಳಿದ “ಈತ ಗುರುಗ್ರಹದಿಂದ ಬಂದವನೆ?”

“ಹೂಂ.” ಎಂದಳು ಮೀನಾ.

“ಆದರೆ ಗುರುಗ್ರಹದವರು ನಮ್ಮಂತೆಯೇ ಇದಾರೆಯೇ?” ಆತ ವಿಸ್ಮಯದ ದನಿಯಲ್ಲಿ ಉಸುರಿದ. “ಗುರುಗ್ರಹ ಸೂರ್ಯನಿಂದ ಭೂಮಿಗಿಂತಲೂ ಹೆಚ್ಚು ದೂರದಲ್ಲಿದೆ. ಆ ಗ್ರಹ ಸೂರ್ಯನಿಗೆ ಒಂದು ಪ್ರದಕ್ಷಿಣೆ ಬರಲು ಮೂರು ವರುಷಕಾಲ ಬೇಕಾಗುವುದು. ಅಲ್ಲಿನ ಉಷ್ಣಮಾನ ನಮಗಿಂತಲೂ ಕಡಿಮೆ. ಆದುದರಿಂದ ಗುರುಗ್ರಹವಾಸಿ ನಮ್ಮಂತೆ ಇರಲಾರರು. ನಮಗಿಂತ ಮೂರು ನಾಲು ಎತ್ತರವಾಗಿರುತಾರೆ. ಮೈಬಣ್ಣ ಹಾಲಿನಂತೆ ಅಚ್ಚ ಬಿಳುಪಾಗಿದೆ. ನಮಗಿಂತಲೂ ಮೂರುನಾಲು ಹೆಚ್ಚುಕಾಲ ಅವರು ಬದುಕುತಾರೆ. ಈತನಾದರೋ ನಮ್ಮಂತೆಯೇ ಇದಾನೆ. ಆದರೆ ನಮಗಿಂತ ತುಸು ಉದ್ದ. ಬಾಯಲ್ಲಿ ಹಲ್ಲುಗಳಿವೆ. ಕಾಲುಗಳು ನಮಗಿಂತ ಉದ್ದವಾಗಿವೆ. ಆದರೆ ಈತ ನಮ್ಮ ಗ್ರಹದವನೇ ಇದಾನೆ. ಎಂದು ನನಗನಿಸುತದೆ.”

“ಈತ ಯಾರು?” ಪಿಸುದನಿಯಲ್ಲಿ ನಾನು ಮೀನಾಳ ಕಿವಿಗಳಲ್ಲಿ ಉಲಿದೆ.

“ಒಬ್ಬ ವಿಜ್ಞಾನಿಗಳು. ನಮ್ಮ ನಗರದ ಆಡಳಿತ ಇವರು ಹೇಳಿದಂತೆ ನಡೆಯುತದೆ.” ಮೀನಳ ನುಡಿಗಳಲ್ಲಿ ಬೆದರಿಕೆ ಹುದುಗಿರುವುದನ್ನು ನಾನು ಕಾಣದಿರಲಿಲ್ಲ.

“ಈತನಿಗೆ ನಮ್ಮ ಭಾಷೆ ಗೊತ್ತಿದೆಯೆ?” ವಿಜ್ಞಾನಿಗಳು ನನ್ನ ಮೊಗ ನೋಡುತ್ತಾ ಪ್ರಶ್ನಿಸಿದರು.

“ಹೂಂ. ನಮ್ಮ ನುಡಿಯನ್ನು ಬಲ್ಲ. ಆದರೆ ಈತನ ಮಾತು ನಮ್ಮ ಭಾಷೆಗಿಂತ ಬಹಳ ವ್ಯತ್ಯಸ್ತವಾದುದು.” ಎಂದಳು ಮೀನಾ.

“ಹಾಗಾದರೆ, ಈತ ಗುರುಗ್ರಹದವನೆಂಬುದು ಶುದ್ಧ ಹುಸಿ. ನಮ್ಮ ಗ್ರಹದವನೇ ಇರಬೇಕು.” ವಿಜ್ಞಾನಿಗಳು ಬೆರಳನ್ನು ಕನ್ನಡಕದ ಹಿಡಿಯ ಮೇಲಾಡಿಸುತ್ತಾ ನುಡಿದರು.

ನಾನು ವಿಜ್ಞಾನಿಗಳೊಡನೆ ಮಾತಾಡಿ, ಅವರ ವಿಚಾರಗಳ ಹೊಲಬನ್ನು ಅರಿತುಕೊಳ್ಳಬೇಕೆಂದು ಆಲೋಚಿಸಿದೆ. ನಾಗರ ಮೀನಾ ಇವರೊಡನೆ ಮಾತಾಡಿ ತಲೆನೋವು ಉಂಟುಮಾಡಿಕೊಳ್ಳುವುದರ ಬದಲು, ಇಂತಹ ವಿಜ್ಞಾನಿಗಳೊಡನೆ ಚರ್ಚಿಸುವುದರಿಂದ ಅವರು ನಿರ್ಮಿಸಿದ ವಿಶ್ವಜನಾಂಗದ ಪರಿಚಯವಾಗಬಹುದು ಎಂದೆನಿಸಿತು. ಆದುದರಿಂದ ನಾನು ತುಟಿ ಬಿಚ್ಚಿದೆ. "ಈ ಗೋಳಕ್ಕೆ ಸಂಬಂಧಿಸಿದ ಮಾನವನೇ ನಾನಿರುವೆನೆಂದು ನೀವು ಹೇಳುತಿರುವಿರಿ. ಆದರೆ ನನ್ನ ಉಡಿಗೆ ತೊಡಿಗೆಗಳು ನಿಮ್ಮಂತಿಲ್ಲ. ನನ್ನ ಭಾಷೆಯಾದರೂ ನಿಮ್ಮದಕ್ಕಿಂತ ತುಸು ಬೇರೆಯಾದುದು."

"ನೀನು ಈ ಗ್ರಹದ ಮನುಷ್ಯನೇ ಇರುವಿಯೆಂಬುದು ಖಚಿತ. ಆದರೆ ನೀನು ಯಾವ ಶತಮಾನದವನೆಂದು ಈಗ ಹೇಳಲಾರೆ. ನನ್ನ ಪ್ರಯೋಗಶಾಲೆಗೆ ಒಮ್ಮೆ ಬಾ. ನೀನು ಇಷ್ಟನೇ ಶತಮಾನದವನು; ನಿನ್ನ ಭಾಷೆ ಇಂತಹದು; ನೀನು ಯಾವ ಭೂಭಾಗದಲ್ಲಿ ಹುಟ್ಟಿ ಬೆಳೆದೆ, ನಿನ್ನ ಸಮಾಜ ಜೀವನ ಆವ ಪರಿಯದು, ಈ ಸಂಗತಿಗಳನ್ನೆಲ್ಲಾ ಒಂದು ಅರೆಚಣದಲ್ಲಿ ಬಿಡಿಸಿ ಹೇಳಬಲ್ಲೆನು. ನಿನ್ನ ಉಡಿಗೆ ತೊಡಿಗೆಗಳ ಮಾದರಿಯನ್ನು ಕಾಣುವಾಗ ನೀನು ಹತ್ತಾರು ಶತಮಾನಗಳ ಹಿಂದಿನವನು ಎಂದೆನಿಸುತದೆ."

"ಹತ್ತಾರು ಶತಮಾನಗಳ ತನಕ ಮನುಷ್ಯ ಬದುಕಲು ಸಾಧ್ಯವೇ?" ಶಿಕ್ಷಣಾಲಯದ ಮುಖ್ಯಾಧಿಕಾರಿಗಳಿಗೆ ಹಾಕಿದ ಪ್ರಶ್ನೆಯನ್ನೇ ಈ ವಿಜ್ಞಾನಿಗಳ ಮುಂದೆಯೂ ಇರಿಸಿದೆ.

"ಏಕೆ ಬದುಕಬಾರದು? ನೂರಾರು ಇನ್ನೂರು ವರ್ಷಗಳ ತನಕ ಇಂದಿನ ಮನುಷ್ಯ ಬದುಕುತಿದ್ದಾನೆ. ಆ ದಾರಿಯಲ್ಲಿ ಹೊಸ ಸಂಶೋಧನೆಗಳನ್ನು ನಡೆಸಿದರೆ, ಹತ್ತು ಶತಮಾನಗಳ ತನಕ ಮನುಷ್ಯ ಬದುಕಲು ಸಾಧ್ಯವಾಗಬಹುದು. ಆದರೆ ಆ ಬಗೆಯ ಸಂಶೋಧನೆಗಳಲ್ಲಿ ನಮಗೆ ಅಂದರೆ ವಿಜ್ಞಾನಿಗಳಿಗೆ ಆಸಕ್ತಿಯಿಲ್ಲ. ಆದರೂ ಮನುಷ್ಯ ಬದುಕಲು ಸಾಧ್ಯ. ನೀನೆತ್ತ ತೆರಳುತಿರುವೆ?"

"ನಿಮ್ಮ ಊರಿನ ಶಿಶು ರಕ್ಷಣಾಲಯವನ್ನು ನೋಡಬೇಕೆಂದು ಹೊರಟಿದ್ದೇನೆ."

"ನಾನೂ ಅಲ್ಲಿಗೇ ತೆರಳುತಿದ್ದೇನೆ, ಪರಿಶೋಧಿಸಲು." ವಿಜ್ಞಾನಿಗಳೆಂದರು. "ನಾವಿಬ್ಬರೂ ಜತೆಗೂಡಿ ಹೋಗುವಾ."

ವಿಜ್ಞಾನಿಗಳ ಮಾತುಗಳಲ್ಲಿ ಹೆಮ್ಮೆ ಹುದುಗಿರಲಿಲ್ಲ. ಲಕ್ಷಾಂತರ ಮಂದಿ ಜೀವಗಳು ತಮ್ಮ ಬೆರಳುಗಳ ಮೇಲೆ ಕುಣಿಯುತಲಿವೆ ಎಂಬ ದರ್ಪ ಅವರಲ್ಲಿ ಸುಳಿದಿರಲಿಲ್ಲ. ಹೊರನೋಟಕ್ಕೆ ಇತರ ಮಾನವರಂತೆಯೇ ಅವರೂ ಕಾಣುತಲಿದ್ದರು. ಜನಸಾಮಾನ್ಯರು ಸಂಚರಿಸುತಲಿದ್ದ ದೋಣಿ ಬಿಂಗಾಮುಗಳಲ್ಲಿಯೇ ಅವರೂ ಸಂಚರಿಸುತಿದ್ದರು; ಅವರೊಡನೆ ಬೆರೆಯುತಿದ್ದರು; ಮಾತುಕತೆ ನಡೆಸುತಿದ್ದರು. ತಾವು ಮೇಲೆಂಬುದನ್ನು ಯಾವ ಬಗೆಯಿಂದಲೂ ಅವರು ತೋರಿಸಿಕೊಳ್ಳುತಿರಲಿಲ್ಲ. ಅಧಿಕಾರ ಅರಿವುಗಳು ಕೈಸೇರಿದೊಡನೆಯೇ ತಾನು ಮೇಲೆಂಬುದು ಮಾನವ ಜಾತಿಗೆ ಅಂಟಿದ ಸೋಂಕು ರೋಗ. ಭವಿಷ್ಯದ ಸಮಾಜ ಈ ದಂಭ ದರ್ಪಗಳಿಗೆ ಜಲಾಂಜಲಿಯನ್ನಿತ್ತುದೆಂದರೆ ಅದೊಂದು ಹೆಗ್ಗಳಿಕೆಯೇ ಸರಿ. ಈ ಯಾಂತ್ರಿಕ ಯುಗ ಹಳೆಯ ರೂಢಿ ಪರಂಪರೆಗಳನ್ನು ಕಿತ್ತೊಗೆದಿದ್ದಿತು. ಆ ಪರಂಪರೆಗೆ ಸೇರಿದ ಗರ್ವದರ್ಪಗಳೂ ಆ ಮಹಾಪೂರದಲ್ಲಿ ಕೊಚ್ಚಿ ಹೋಗಿರಬಹುದು. ಆದುದರಿಂದಲೇ ವಿಶ್ವ ಜನಾಂಗದ ಸೂತ್ರಧಾರಿಗಳಾದ ವಿಜ್ಞಾನಿಗಳು, ತಾವು ಜನಸಾಮಾನ್ಯರಿಗಿಂತಲೂ ಮೇಲೆಂದು ಮೆರೆಯುತಿರಲಿಲ್ಲ. ಮಾನವನಲ್ಲಿ ಮೈದೋರಿದ ಈ ವಿಲಕ್ಷಣ ಗುಣವನ್ನು ಕಂಡು ನನಗೆ ಅಚ್ಚರಿಯೆನಿಸಿತು.

ಬಿಂಗಾಮು ತೆರಳುತಿದ್ದಿತು. ನಾನು ಮಾತಾಡದೆ ಕುಳಿತಿದ್ದೆ. ವಿಜ್ಞಾನಿಗಳು ನನ್ನ ಮೊಗ ನೋಡುತ್ತಾ ಆಲೋಚನಾಮಗ್ನರಾಗಿದ್ದರು. ನನ್ನ ಪ್ರಶ್ನೆಯೊಂದು ಅವರನ್ನು ಆಲೋಚನೆಯ ಕಡಲಿನಿಂದ ಮೇಲಕ್ಕೆತ್ತಿತು. “ ನಿಮ್ಮ ವೈಜ್ಞಾನಿಕ ಸಂಸ್ಕೃತಿಯಾದರೂ ಕೊನೆಗಾಣಬಹುದೆಂದು ಅನಿಸುವುದಿಲ್ಲವೇ ? ”

“ ಶಿಲಾಯುಗದಿಂದ ವೈಜ್ಞಾನಿಕ ಯುಗದವರೆಗೆ ಮನುಷ್ಯ ನೂರಾರು ಅಲ್ಲ, ಸಾವಿರಾರು ಮೆಟ್ಟಿಲುಗಳನ್ನು ಏರುತ್ತಾ ಬಂದ. ” ವಿಜ್ಞಾನಿಗಳ ಅಗಲವಾದ ಹಣೆಯಲ್ಲಿ ಆಲೋಚನೆಯ ಗೆರೆಯೊಂದು ಮೂಡಿತು. “ ಪ್ರತಿಯೊಂದು ಸಂಸ್ಕೃತಿಯೂ ಹುಟ್ಟನ್ನು ಹೊಂದಿ ಕೊನೆಗೆ ಮೃತಿಯನ್ನೈದಿತು. ಹಳೆಯ ಸಂಸ್ಕೃತಿಯ ಪರಿಗಳನ್ನು ಕಿತ್ತೆಸೆದು ಮನುಷ್ಯ ಹೊಸ ಪರಂಪರೆಯನ್ನು ಹಿಡಿದ. ಇತರ ಸಂಸ್ಕೃತಿಗಳಂತೆ ನಮ್ಮ ವೈಜ್ಞಾನಿಕ ಸಂಸ್ಕೃತಿಯಾದರೂ ಮೃತಿಯನ್ನೈದಲೇಬೇಕು. ಆದರೆ ಮುಂದೆ ಯಾವ ಬಗೆಯ ಸಂಸ್ಕೃತಿ ಮೂಡುವುದೆಂಬುದು ಸಂದೇಹಾಸ್ಪದ. ವೈಜ್ಞಾನಿಕ ಸಂಸ್ಕೃತಿಯ ಕೊನೆಯೊಡನೆ ಮಾನವ ಸಮಾಜ

ವಾದರೂ ಅಳಿದುಹೋಗಬಹುದು. ಆದರೆ ಆ ಕಾಲ ಬರಬೇಕಾದರೆ ಇನ್ನು ಹತ್ತಾರು, ಅಲ್ಲ ನೂರಾರು ಶತಮಾನಗಳ ಕಾಲ ಬೇಕಾಗಿ ಬರಬಹುದು.”

ನನ್ನ ಮನಸ್ಸಿನಲ್ಲಿ ಯಾವ ವಿಚಾರ ಮೂಡಿತ್ತೊ, ಅದೇ ಚಿಂತನೆ ವಿಜ್ಞಾನಿಗಳ ಚಿತ್ತದಲ್ಲಿಯೂ ಸ್ಫುರಿಸಿರುದನ್ನು ಕಂಡು ನನಗೆ ಸೋಜಿಗ ವಾಯಿತು.

“ನಿಮ್ಮ ಸಂಸ್ಕೃತಿ ಕೊನೆಗೊಳ್ಳುವುದೆಂಬುದನ್ನರಿತೂ, ನೀವೇಕೆ ಪ್ರಯತ್ನಿಸುವಿರಿ ? ನಿಮಗೆ ಯಾವ ಲಾಭವಿದೆ ?” ಎಂದೆ ನಾನು.

“ಬದುಕುವುದು, ಬಾಳುವುದು ಮಾನವ ಧರ್ಮ.” ವಿಜ್ಞಾನಿಗಳು ಎಳನಗೆಯನ್ನು ಬೀರಿದರು. “ಲಾಭ ಸಂಪಾದನೆಯೇ ಭಂಡವಾಳಿ ಸಂಸ್ಕೃತಿಯ ಗುರಿಯಾಗಿತ್ತು. ಲಾಭದ ಸಲುವಾಗಿ ಭಂಡವಾಳಿಗರು ಆ ಕಾಲದಲ್ಲಿ ಯುದ್ಧ ಹೂಡುತ್ತಿದ್ದರು; ನೆತ್ತರ ಹೊನಲಿನಿಂದ ನೆಲವನ್ನು ಕೆಂಪಾಗಿಸುತ್ತಿದ್ದರು. ಆದರೆ ಅನಂತರ ಬಂದ ಜನತಾ ಸಂಸ್ಕೃತಿ ಲಾಭದ ಬೇರಿಗೇ ಕಿಚ್ಚನ್ನಿಕ್ಕಿತು. ವೈಜ್ಞಾನಿಕ ಸಂಸ್ಕೃತಿ ಆರ್ಥಿಕ ಮತ್ತು ವ್ಯವಸಾಯದ ಸಮಸ್ಯೆಗಳನ್ನು ಬಗೆಹರಿಸಿ, ಜನಸಾಮಾನ್ಯರ ಬದುಕನ್ನು ಸರಳವಾಗಿಸಿತು. ತಡೆತೊಡಕುಗಳಿಲ್ಲದೆ ಮಾನವ ಸಮಾಜ ಪುರೋಭಿವೃದ್ಧಿಯನ್ನು ಹೊಂದಬೇಕೆಂಬುದೇ, ನಮ್ಮ ಅಂದಿನ ವಿಜ್ಞಾನಿಗಳ ಆಶಯ.”

“ನಿಮ್ಮ ಸಂಸ್ಕೃತಿಯಲ್ಲಿ ಮನುಷ್ಯಜೀವನ ಯಂತ್ರವಂತಾಗಿದೆ. ಮಾನವನ ಎದೆಯಲ್ಲಿ ಸಹಜವಾಗಿ ಮೂಡಬಹುದಾದ ಆಶೆ ಆಕಾಂಕ್ಷೆ ಭಾವನೆಗಳನ್ನೆಲ್ಲಾ ನೀವು ತೊಡೆದು ಹಾಕಿರುವಿರಿ. ನೀವು ನಿರ್ಮಿಸಿದ ಯಂತ್ರಗಳಂತೆ ಅವನಾದರೂ ದಿನ ಕಳೆಯುತ್ತಾನೆ.”

“ನಿನ್ನ ಮಾತನ್ನು ಪೂರ್ತಿಯಾಗಿ ನಾನು ಅಲ್ಲಗಳೆಯುವುದಿಲ್ಲ.” ವಿಜ್ಞಾನಿಗಳು ಮಾರ್ನುಡಿದರು. “ಭಂಡವಾಳಿ ಸಂಸ್ಕೃತಿಯಲ್ಲಿದ್ದ ಅಸಮತ್ವ, ಜನಾಂಗಗಳ ಪರಸ್ಪರ ವಿದ್ವೇಷ ಮೊದಲಾದ ವೈಷಮ್ಯಗಳು ಅವನಿಗೆ ಅರಿಯದಂತೆ ಮನುಷ್ಯನ ಬುದ್ಧಿ ಭಾವನೆಗಳನ್ನು ಉದ್ದೀಪನಗೊಳಿಸುತ್ತಿದ್ದುವು. ಜನತಾಯುಗದಲ್ಲಿ ವಿಶ್ವ ಜನಾಂಗ, ವಿಶ್ವ ಕುಟುಂಬದ ಕಲ್ಪನೆಗಳು ಅವನ ಉತ್ಸಾಹದ ಚಿಲುಮೆಯನ್ನು ಚಿಮ್ಮುವಂತೆ ಮಾಡಿದುವು. ಜನತಾ ಸಂಸ್ಕೃತಿ ಮುಪ್ಪಡರಲು, ವಿಜ್ಞಾನ ಮಾನವನ ಬುದ್ಧಿಗೆ ಆಹಾರವನ್ನೊದಗಿಸಿತು. ಆದರೆ ವಿಜ್ಞಾನದ ಬುದ್ಧಿಯನ್ನು ಹಿಡಿದು ನುಡಿಸಬಲ್ಲ ಬುದ್ಧಿವಿಕಾಸವನ್ನು ಎಲ್ಲ

ಮಾನವರೂ ಪಡೆದಿಲ್ಲ. ಆದುದರಿಂದಲೇ ಜನಸಾಮಾನ್ಯರು ಯಂತ್ರಗಳನ್ನು ಆಳುವುದರ ಬದಲು, ಯಂತ್ರಗಳ ಆಳುಗಳಾಗಿದಾರೆ. ಆ ಅಳವನ್ನು ಪಡೆದವರು ಒಡೆಯರಾಗಿ ಯಂತ್ರಗಳನ್ನು ಮಾತ್ರವಲ್ಲ ಇಡೀ ಪ್ರಪಂಚವನ್ನೇ ಆಳುತಿದಾರೆ ''

'' ಮನುಷ್ಯನ ಸ್ವಾತಂತ್ರ್ಯವನ್ನೇ ಇಲ್ಲವಾಗಿಸಿ, ಅವನ ಸುತ್ತಲೂ ಒಂದು ಉಕ್ಕಿನ ಕೋಟೆಯನ್ನೇ ನಿರ್ಮಿಸಿರುವಿರಲ್ಲ ? '' ನಾನು ನುಡಿದೆ '' ಉಡಿಗೆ ತೊಡಿಗೆ, ಆಹಾರ ಇತ್ಯಾದಿ ಕ್ಷುಲ್ಲಕ ವಿಚಾರಗಳಲ್ಲಿ ಸಹ ಮನುಷ್ಯನ ಸ್ವಾತಂತ್ರ್ಯವನ್ನು ನೀವು ಕಸಗೊಂಡಿದೀರಿ ''

'' ಭಂಡವಾಳಿ ಯುಗವೇ ಇರಲಿ ಅಥವಾ ಜನತಾ ಯುಗವೇ ಇರಲಿ, ಸಮಾಜ ಸುಖಶಾಂತಿಗಳಿಂದ ಕೂಡಿರಬೇಕಾದರೆ, ನಿಯಮ ನಿಬಂಧನೆಗಳೂ, ಕಾಯಿದೆ ಕಟ್ಟಳೆಗಳೂ ಅಗತ್ಯ. ವೈಜ್ಞಾನಿಕ ಪರಿಶೋಧನೆಗಳಿಂದ ಇಂತಹ ಬಗೆಯ ಆಹಾರವನ್ನೇ ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿ, ಆ ಬಗೆಯ ಆಹಾರವನ್ನೇ ಒದಗಿಸಿದುದರಿಂದ ಇಂದಿನ ಮಾನವನು ನೀರೋಗ ದೃಢಗಾತ್ರನಾಗಿದಾನೆ. ಜನರು ಸಮವಸ್ತ್ರಗಳನ್ನು ತೊಡುವುದರಿಂದ ಯುಗಯುಗಾಂತರಗಳಿಂದ ಮಾನವನಲ್ಲಿ ಬೇರೂರಿದ್ದ ಮೇಲು ಕೀಳೆಂಬ ಭಾವನೆ ಪೂರ್ಣವಾಗಿ ಅಳಿದುಹೋಗಿದೆ. ನಮ್ಮ ನಿಯಮಗಳು ಅವನ ಸುಖಶಾಂತಿಗಳನ್ನು ಕಸಿದುಕೊಳ್ಳುವುದರ ಬದಲು, ಅವನ ನೆಮ್ಮದಿ ಮತ್ತು ಸುಖಗಳನ್ನು ವಿಪುಲಗೊಳಿಸುತಲಿವೆ. ನಮ್ಮ ವೈಜ್ಞಾನಿಕ ಸಂಸ್ಕೃತಿ ಸರ್ವಾಂಗ ಸುಂದರವಾದುದು, ನ್ಯೂನತೆಗಳಿಲ್ಲದುದು ಎಂದು ನಾವು ಹೆಮ್ಮೆ ಪಡುವುದಿಲ್ಲ. ನಮ್ಮ ಆಡಳಿತದಲ್ಲಿರತಕ್ಕ ಲೋಪದೋಷಗಳನ್ನು ನಮ್ಮಷ್ಟು ಅರಿತವರು ಇನ್ನಾರೂ ಇರಲಾರರು. ಆ ಕುಂದುಕೊರತೆಗಳನ್ನು ಇಲ್ಲವಾಗಿಸಲು ನಮ್ಮ ಪ್ರಯೋಗ ಶಾಲೆಗಳಲ್ಲಿ ನಿರಂತರ ಪ್ರಯತ್ನಿಸುತಿರುವೆವು. ''

ವಿಜ್ಞಾನಿಗಳ ಮಾತು ಮುಗಿಯುವಷ್ಟರಲ್ಲಿ ಬಿಂಗಾವರ್ ನಿಂತಿತು. '' ಇಲ್ಲೇ ಶಿಶುರಕ್ಷಣಾಲಯ. '' ಎಂದು ಅವರು ಆಸನದಿಂದ ಎದ್ದರು. ನಾನೂ ಅವರ ಸಂಗಡ ವಾಹನದಿಂದ ಇಳಿದೆವು. ವಿಜ್ಞಾನಿಗಳು ಮುಂದೆ ಹೆಜ್ಜೆ ಹಾಕುತ್ತಾ ಉಲಿದರು. '' ನಿನ್ನ ಬುದ್ಧಿ ಹರಿತವಾದುದು. ಯಾಂತ್ರಿಕ ವಿಜ್ಞಾನಿಯ ಕಣ್ಣು ನಿನಗಿದೆ. ಆದರೆ ನಿನ್ನ ವಿಚಾರಗಳು ಹಳೆಯವು; ಬಹಳ ಹಳೆಯವು. ನಾನು ಮಾನವನ ಬುದ್ಧಿ ವಿಕಾಸದ ಬಗೆಯನ್ನು ಕುರಿತು ಹಲವು

ಸಂಶೋಧನೆಗಳನ್ನು ನಡೆಸಿರುವೆನು. ಬುದ್ಧಿಶಕ್ತಿ ಪರಂಪರೆಯಾಗಿ ತಂದೆಯಿಂದ ಮಗನಿಗೆ ಬರುತ್ತದೆ ಎಂದು ಹಿಂದಿನವರ ಭಾವನೆ. ಆದರೆ ಅದು ಪೂರ್ತಿಯಾಗಿ ನಿಜವಲ್ಲ. ಮೂರು ನಾಲ್ಕು ತಲೆಮಾರುಗಳ ತನಕ ಬುದ್ಧಿಬಲ ಸಹಜವಾಗಿ ತಂದೆಯಿಂದ ಮಗನಿಗೆ ಹರಿದು ಬರಬಹುದು. ಅನಂತರ ಅದು ಬತ್ತಿ ಹೋಗುವುದು, ಬರಡಾಗುವುದು. ಈ ದೇಶದಲ್ಲಿ ಸುಮಾರು ಹತ್ತು ಹನ್ನೆರಡು ಶತಮಾನಗಳ ಹಿಂದೆ ಬ್ರಾಹ್ಮಣರೆಂಬ ಒಂದು ಪಂಗಡದವರಿದ್ದರು. ಪ್ರಾರಂಭ ಘಟ್ಟದಲ್ಲಿ ಅವರು ತೋರಿಸಿದ ಬುದ್ಧಿಬಲ ಅಸಾಧಾರಣವಾದುದು. ತಮ್ಮ ಜ್ಞಾನವನ್ನು ಕೆಳನೆಲೆಗೆ ಇಳಿಸಬಾರದೆಂಬ ಭಾವನೆಯಿಂದಲೋ ಏನೋ ಇತರ ಮಾನವರೊಡನೆ ಅವರು ಬೆರೆಯಲಿಲ್ಲ. ಪರಿಣಾಮವಾಗಿ ಹಲವು ಶತಮಾನಗಳಲ್ಲಿಯೆ ಅವರ ಬೌದ್ಧಿಕ ಚೇತನದ ಚಿಲುಮೆ ಬತ್ತಿಹೋಯಿತು. ಬುದ್ಧಿ ಪುರೋಗತಿಯನ್ನು ಹೊಂದಬೇಕಾದರೆ, ಮಾನವ ರಕ್ತ ಬೇರೆ ಬೇರೆ ಪೀಳಿಗೆಗಳಲ್ಲಿ ಬೆರೆಯಬೇಕು. ಆದುದರಿಂದಲೇ ಕುಟುಂಬ ಜೀವನದ ಪರಂಪರೆಗೆ ನಾವು ಕೊಡಲಿ ಹಾಕಿದೆವು."

"ಅದರೊದನೆಯೇ ಕುಟುಂಬ ಜೀವನದ ಸಂಸ್ಕಾರ, ಬಂಧು ಬಾಂಧವರಲ್ಲಿ ಮನುಷ್ಯನು ತೋರುವ ಸ್ನೇಹ ವಿಶ್ವಾಸ, ಔದಾರ್ಯ ಮೊದಲಾದ ಗುಣಗಳನ್ನೆಲ್ಲ ಸುಟ್ಟು ಬೂದಿ ಮಾಡಿದಂತಾಯಿತು."

"ನೀನು ಹತ್ತು ಶತಮಾನಗಳ ಹಿಂದೆ ಇದ್ದ ತತ್ತ್ವಬೋಧಕರ ಧಾಟಿಯಲ್ಲಿ ಮಾತಾಡುತಿರುವೆ. ಆದರೆ ಈ ಮಾತುಗಳೆಲ್ಲ ಅರ್ಥವಿಲ್ಲದುವು."

ಈ ತರ್ಕ ಮುಗಿವ ಮುನ್ನ ನಾವು ಶಿಶುರಕ್ಷಣಾಲಯದ ಸಮೀಪಕ್ಕೆ ಬಂದೆವು. ನಾನು ನೋಡಿದ ಕಟ್ಟಡಗಳಲ್ಲಿ ಶಿಶುಮಂದಿರವೇ ಅಂದವಾದುದು. ಅಪರೂಪವಾದ ಹೂದೋಟ ಕಟ್ಟಡದ ಮುಂದಿತ್ತು. ಹಲವು ಬಗೆಯ ಅಂದವಾದ ಗಿಡಬಳ್ಳಿಗಳು ತೋಟದಲ್ಲಿ ಬೆಳೆದಿದ್ದುವು. ಆದರೆ ನಾವು ಸಾಧಾರಣವಾಗಿ ನೋಡುವ ಗುಲಾಬಿ, ಸೇವಂತಿಗೆ, ಇರುವಂತಿಗೆ, ಸಂಪಿಗೆ, ಜಾಜಿ, ಪಾರಿಜಾತ, ಮಲ್ಲಿಗೆ ಮೊದಲಾದುವು ಅಲ್ಲಿರಲಿಲ್ಲ. ಆ ಗಿಡಬಳ್ಳಿಗಳ ಹೆಸರೂ ನನಗೆ ತಿಳಿಯದು. ಅವನ್ನು ಮುನ್ನ ಎಲ್ಲಿಯೂ ನೋಡಿದ ನೆನಪು ನನಗಿರಲಿಲ್ಲ. ಒಂದು ಗಿಡ ಗುಲಾಬಿಯಂತೆ ತೋರಿತು. ಆದರೆ ಗುಲಾಬಿಯಂತಲ್ಲ ಅದರ ಬಣ್ಣ. ಹೂವಿನ ಆಕಾರ ಗುಲಾಬಿಯಂತಿದ್ದರೂ, ಒಂದೇ ಹೂವಿನ ಎಸಳುಗಳು ಬಿಳಿ, ಹಳದಿ ಕೆಂಪು, ನೀಲಿ ಹಸರು, ಹೀಗೆ ಬೇರೆ ಬೇರೆ ಬಣ್ಣ

ಗಳನ್ನು ತಳೆದಿದ್ದುವು. ಬಳ್ಳಿಯೊಂದರಿಂದ ಮಲ್ಲಿಗೆಯ ಸುವಾಸನೆ ಬಂದು ಮೂಗಿಗೆ ಬಡಿಯುತ್ತಿದ್ದರೂ, ಹೂ ಮಾತ್ರ ಮಲ್ಲಿಗೆಯಂತಿರಲಿಲ್ಲ. ಆ ಹೂ ಬಿರಿದು ಅಂಗೈಯಗಲವಾಗಿದ್ದು ಗಂಟೆಯ ಆಕಾರದಲ್ಲಿತ್ತು. ಸಸ್ಯ ಪ್ರಪಂಚದಲ್ಲಿ ವಿಜ್ಞಾನಿ ತನ್ನ ಬೆರಳುಗಳನ್ನಾಡಿಸಿ, ಹೊಸ ಬಗೆಯ ಗಿಡಬಳ್ಳಿಗಳನ್ನು ಸೃಷ್ಟಿಸಿ, ನವಬ್ರಹ್ಮನೆಂದೆನಿಸಿಕೊಂಡಿದ್ದ.

"ಇದೇನು, ಹೂಗಿಡಗಳನ್ನೇ ಎವೆ ಮುಸುಕದೆ ನೋಡುತ್ತಿರುವೆಯಲ್ಲ!" ನನ್ನ ಪಕ್ಕದಲ್ಲಿದ್ದ ಮೀನಾ ಪಿಸುಗುಟ್ಟಿದಳು.

"ಈ ಹೊಸ ಬಗೆಯ ಗಿಡಬಳ್ಳಿಗಳನ್ನು ಈತನಕ ನಾನು ನೋಡಲಿಲ್ಲ!"

"ನಮ್ಮ ಪ್ರಪಂಚದಲ್ಲಿ ವಿಜ್ಞಾನಿಯೆಸಗಿದ ಕ್ರಾಂತಿಯ ಪರಿಣಾಮಗಳಿವು" ನನ್ನ ನುಡಿಗೆ ಮೀನಾಳ ಬದಲು ವಿಜ್ಞಾನಿಗಳೇ ಉತ್ತರಿಸಿದರು. "ಇವು ಕೆಲವು ಮಾತ್ರವಲ್ಲ. ಸಸ್ಯಲೋಕದಲ್ಲಿ ನೂರಾರು ಪರಿವರ್ತನೆಗಳನ್ನು ಮಾಡಿದೇವೆ. ಸಮಗ್ರ ಸೃಷ್ಟಿಯನ್ನೆ ಅಂಕೆಗೆ ತರಬೇಕೆಂದು ನಮ್ಮ ಸಾಹಸ."

"ಇಡೀ ವಿಶ್ವವೇ ಕೈಯಲ್ಲಿ ಹಿಡಿಯಬಲ್ಲ ಪುಟ್ಟ ಚೆಂಡಿನಂತೆ ಆಗಿದೆಯಲ್ಲ!"

"ಭೂಮಿಯೇನೋ ನಮ್ಮ ಅಂಕೆಗೆ ಒಳಪಟ್ಟಿದೆ. ಆದರೆ ಸೌರವ್ಯೂಹ ತಾರೆಗಳ ಸಾಲು ಇವು ಇನ್ನೂ ನಮ್ಮ ಕೈಗಳಿಗೆ ಸಿಲುಕಿಲ್ಲ."

ಈ ಒಂದು ನುಡಿ ವಿಜ್ಞಾನಿಯ ಮಹತ್ವಾಕಾಂಕ್ಷೆ ಆವ ಪರಿಯದೆಂದು ನನಗರುಹಿತು. ಈ ಚಿಕ್ಕ ಗೋಳದಲ್ಲಿ ತನ್ನ ಸರ್ವಾಧಿಕಾರದ ಬಾವುಟವನ್ನು ಹಾರಿಸುವುದರಿಂದ ಆತ ತೃಪ್ತಿಯನ್ನು ತಳೆಯನು. ಸೌರವ್ಯೂಹ, ತಾರೆಗಳ ಮಾಲೆಗಳಲ್ಲೆಲ್ಲ ತನ್ನ ವಿಜಯ ಪತಾಕೆ ಹಾರಾಡುತ್ತಿರಬೇಕೆಂಬ ಹೆಬ್ಬಯಕೆ ಆತನದು. ಆದರೆ ಈ ಅಪೇಕ್ಷೆ ಆತನ ಕೈಗೆ ಸಿಲುಕದ ಹಣ್ಣು.

ನಾವೀಗ ಕಟ್ಟಡದೊಳಗೆ ಪ್ರವೇಶಿಸಿದೆವು. ನಾಲ್ಕು ನೆಲೆಗಳಿಂದ ಕೂಡಿದ ಸುಂದರವಾದ ಕಟ್ಟಡವದು. ಜಗಲಿಗಳ ಮೇಲೆ ಸಾಲುಸಾಲಾಗಿ ಹೂಗಿಡಗಳ ಚೆಟ್ಟಿಗಳಿದ್ದುವು. ಬಗೆಬಗೆಯ ಕುಸುಮಗಳು ಅರಳಿ ಸೌರಭವನ್ನು ದಿಕ್ಕುದಿಕ್ಕುಗಳಿಗೆ ಎರಚುತ್ತಿದ್ದುವು. ಬಾಗಿಲುಗಳ ಮತ್ತು ಕಿಟಕಿಗಳ ಮೇಲೆ ಅಂದವಾದ ಪರದೆಗಳನ್ನು ನೇತುಹಾಕಿದ್ದರು. ಈ ಪರದೆಗಳು ಪಾರದರ್ಶಕ ಗುಣವುಳ್ಳವು. ಬಿಸಿಲಿನ ಕಾವನ್ನು ಮಾತ್ರ ಹೀರಿ, ಬೆಳಕನ್ನು ಮಾತ್ರ ಒಳಗೆ ಬಿಡುತ್ತಿದ್ದುವು.

"ಎಲ್ಲೂ ಕಾಣದ ಹೂತೋಟಗಳನ್ನು ಇಲ್ಲೇಕೆ ಮಾಡಿರುವಿರಿ?" ನಾನು ಪಿಟ್ಲಾನಿಗಳನ್ನು ಪ್ರಶ್ನಿಸಿದೆ.

"ಇದು ಎಳೆ ಮಕ್ಕಳು ಬೆಳೆದು ದೊಡ್ಡವರಾಗುವ ಎಡೆ. ಅವರ ಕಣ್ಣುಗಳನ್ನು ಸೆಳೆಯಬಲ್ಲ, ಜೀವನವನ್ನು ಉಲ್ಲಾಸಗೊಳಿಸಬಲ್ಲ ಸಾಧನಗಳು ಅಗತ್ಯ. ಹೂಗಿಡಗಳು ಆ ಕೆಲಸವನ್ನು ನಿರ್ವಹಿಸುತ್ತವೆ. ಆದುದರಿಂದಲೇ ಇಲ್ಲಿ ಹೂಗಿಡಗಳನ್ನು ನೆಟ್ಟು ಬೆಳೆಸಿದ್ದೇವೆ. ದೊಡ್ಡವರ ಮನೋರಂಜನೆಗೋಸುಗ ಬೃಹದಾಕಾರದ ಉದ್ಯಾನಗಳನ್ನು ನಿರ್ಮಿಸಿದ್ದೇವೆ."

ನನ್ನ ಸಂಗಡಲೇ ಪಿಟ್ಲಾನಿಗಳಿದ್ದುದರಿಂದ ಶಿಶುಮಂದಿರದೊಳಗೆ ಪ್ರವೇಶಿಸಲು ಆತಂಕವೇನೂ ಒದಗಲಿಲ್ಲ. ಮಂದಿರದ ಅಧಿಕಾರಿಗಳು, ನೌಕರರು ಎಲ್ಲರೂ ಹೆಂಗಸರೇ ಆಗಿದ್ದರು. ಗಂಡಸರ ಸುಳಿವೇ ಅಲ್ಲಿರಲಿಲ್ಲ. ನಾವು ಮೊದಲು ಎಳೆಯ ಮಕ್ಕಳಿರುವ ಕೋಣೆಗೆ ಹೋದೆವು. ಪ್ರತಿಯೊಂದು ಕೋಣೆಯಲ್ಲಿಯೂ ಇಪ್ಪತ್ತೈದು ಕೂಸುಗಳಿದ್ದುವು. ಪ್ರತಿಯೊಂದು ಹಸುಳೆಗೂ ಒಂದೊಂದು ತೊಟ್ಟಿಲು, ತಾಯಿಗೆ ಮಲಗಿಕೊಳ್ಳಲು ಒಂದು ತೂಗುಮಂಚ; ಕುಳ್ಳಿರಲು ಮೆತ್ತನೆಯ ಸೋಫ, ಒಂದು ಪುಟ್ಟ ಹಾಲುಗಲ್ಲಿನ ಮೇಜು, ಈ ಸೌಕರ್ಯಗಳನ್ನು ಪ್ರತಿಯೊಬ್ಬ ತಾಯಿಗೂ ಒದಗಿಸಿದ್ದರು. ತೊಟ್ಟಿಲಲ್ಲಿ ಮಲಗಿದ ಕಂದನನ್ನು ತೂಗಬೇಕಾಗಿರಲಿಲ್ಲ. ವಿದ್ಯುತ್ತು ಆ ಕೆಲಸವನ್ನು ನಿರ್ವಹಿಸುತ್ತಿದ್ದಿತು. ಕೋಣೆಗಳಲ್ಲಿ ಬಾನುಲಿಯ ಗ್ರಾಹಕ ಯಂತ್ರಗಳಿದ್ದುವು, ಅವು ನಿಯಮಿತ ವೇಳೆಗೆ ಮಧುರ ಸಂಗೀತಗಳಿಂದ ತಾಯಂದಿರ ಮನಸ್ಸನ್ನು ಉಲ್ಲಾಸಗೊಳಿಸುತ್ತಿದ್ದುವು. ಪ್ರಪಂಚದ ವಿವಿಧ ಭಾಗಗಳಿಂದ ಸುದ್ದಿಗಳು ದೊರಕುತ್ತಿದ್ದುವು. ಅವರಿಗೆ ಓದಲು ದೊಡ್ಡ ದೊಡ್ಡ ಹೊತ್ತಗೆಗಳನ್ನು ಒದಗಿಸಿದ್ದರು. ಆದರೆ ಅವು ಓದುವ ಪುಸ್ತಕಗಳಲ್ಲ, ಅವು ಚಿತ್ರ ಪುಸ್ತಕಗಳು. ನಾವು ಪುಸ್ತಕಗಳನ್ನು ಓದಿ ತಿಳಿಯುವಂತೆಯೇ, ಆ ತಾಯಂದಿರು ಚಿತ್ರಗಳಲ್ಲಿ ನಿರೂಪಿತವಾದ ಸಂಗತಿಗಳನ್ನು ಗ್ರಹಿಸುತ್ತಿದ್ದರು. ಈ ಚಿತ್ರ ಪುಸ್ತಕಗಳಲ್ಲಿ ಹಲವು ಆಕಾಶವಾಣಿ, ವಿಮಾನ, ಉಳುವ ಯಂತ್ರ ಮೊದಲಾದ ವಿವಿಧ ಯಂತ್ರಗಳ ಚರಿತ್ರೆಗಳಾಗಿದ್ದುವು. ಇನ್ನು ಹಲವು ಯಂತ್ರಚಾಲನೆಯ ಹಿನ್ನೆಲೆಯಿಂದ ಕೂಡಿದ ಕಥೆಗಳಾಗಿದ್ದುವು. ಆ ಹೊತ್ತಗೆಗಳಿಂದ ಆ ಯುಗದಲ್ಲಿ ಚಿತ್ರ ಸಾಹಿತ್ಯವೆಂಬ ಹೊಸ ಬಗೆಯ ಸಾಹಿತ್ಯ ಮೂಡಿದೆಯೆಂಬುದು ನನಗೆ ಅರಿವಾಯಿತು.

ತಾಯಂದಿರ ಆರೈಕೆಯ ಬಗ್ಗೆ ಶಿಶುಮಂದಿರದವರು ಬಹು ಜಾಗ್ರತೆಯನ್ನು ತೆಗೆದುಕೊಳ್ಳುತ್ತಿದ್ದರು. ನಿಯಮಿತ ವೇಳೆಗೆ ಸರಿಯಾಗಿ ಆಹಾರಗಳು, ರುಚಿಯಾದ ಉಡಿಗೆತೊಡಿಗೆಗಳು, ಮನಸ್ಸನ್ನು ಶಾಂತವಾಗಿರಿಸಲು ಅಗತ್ಯವೆನಿಸಿದ ಸಂಗೀತ ಇವೆಲ್ಲ ಅವರಿಗೆ ಪೂರೈಸಲಾಗಿದ್ದುವು. ತಾಯಂದಿರಿಗೇ ಸಮಾಜದಲ್ಲಿ ಮೊದಲನೆಯ ಸ್ಥಳ. ಅವರ ಅಪೇಕ್ಷೆಗಳಾವುವನ್ನೂ ಸಮಾಜ ತಿರಸ್ಕರಿಸುತ್ತಿರಲಿಲ್ಲ. ನೂರಾರು ಮಾತೆಯರ ಮೊಗಗಳನ್ನು ನೋಡಿದೆ. ಅವು ಅರಳಿದ ಗುಲಾಬಿ ಹೂವಿನಂತಿದ್ದುವು. ಒಂದೇ ಒಂದು ಮೊಗದಲ್ಲಿಯಾದರೂ, ಬೇಸರಿಕೆ ಬಳಲಿಕೆ ವೇದನೆಗಳ ಕರಿನೆರಳನ್ನು ನಾನು ಕಾಣಲಿಲ್ಲ. "ತಾಯಂದಿರ ಪಾಲನೆಯಲ್ಲಿ ಬಹು ಎಚ್ಚರಿಕೆ ವಹಿಸಿರುವಿರಿ." ಎಂಬ ಪ್ರಶಂಸೆಯ ಉದ್ಗಾರ ನನ್ನ ಕೊರಳಿಂದ ಹೊರಟಿತು.

"ಹೌದು. ವಿಶ್ವಜನಾಂಗಕ್ಕೆ ಮುಂದಿನ ಪೀಳಿಗೆಯನ್ನು ನೀಡತಕ್ಕವಳೆಂದರೆ ತಾಯಿಯೇ, ಸರಿ. ಮಾತೆ ಆರೋಗ್ಯವಾಗಿರಬೇಕು. ಸುಖಶಾಂತಿಗಳಲ್ಲಿ ಆಕೆ ಬಾಳಬೇಕು. ಹಾಗಿದ್ದರೆ ಮಾತ್ರ ಆಕೆಯ ಬಸಿರಿಂದ ಒಗೆತರುವ ಮುಂದಿನ ಜನಾಂಗವಾದರೂ ಸುಖಶಾಂತಿಗಳ ನೆಲೆಯುಳಿಸಬಹುದು."

"ಗರ್ಭಿಣಿ ಯಾವ ತಿಂಗಳಲ್ಲಿ ಈ ಮಂದಿರಕ್ಕೆ ಬರುವಳು?"

"ರಕ್ಷಣಾಲಯದಲ್ಲಿ ತಾಯಿಯಾಗುವವಳು ಒಂದುವರೆ ವರುಷವಿರಬೇಕಾಗುವುದು. ನಾಲ್ಕು ತಿಂಗಳು ಆದ ಅನಂತರ ಆಕೆ ಶಿಶುಮಂದಿರವನ್ನು ಸೇರಲೇಬೇಕು. ಮೂರು ತಿಂಗಳ ಅನಂತರ ಹೆಣ್ಣು ಗಂಡುಗಳ ಶರೀರ ಸಂಪರ್ಕ ಹಿತಕರವಾದುದಲ್ಲ. ಬಸಿರಲ್ಲಿಹ ಮಗುವಿನ ಮಾನಸಿಕ ಮತ್ತು ಶಾರೀರಿಕ ಸ್ಥಿತಿಗಳಲ್ಲಿ ದುಷ್ಪರಿಣಾಮವನ್ನುಂಟುಮಾಡುತ್ತದೆ. ಆದುದರಿಂದಲೇ ನಾಲ್ಕು ತಿಂಗಳಲ್ಲಿ ಆಕೆಗೆ ಎಡೆಮಾಡಿದ್ದೇವೆ. ಶಿಶುವಿನ ಜನನವಾದ ಅನಂತರ ಒಂದು ವರುಷದ ವರೆಗೆ ಆಕೆ ಈ ಮಂದಿರದಲ್ಲಿಯೇ ಇರಬೇಕಾಗುವುದು. ಜನನವಾಗಿ ಒಂದು ವರುಷದ ವರೆಗೆ ಮಗು ತಾಯಿಯೊಡನೆ ಇರುವುದು ಅಗತ್ಯ. ಅನಂತರ ಆಕೆ ಹೊರಗೈದುವಳು. ಇಲ್ಲಿ ಪ್ರತಿವಾರ ಆಕೆಯ ದೇಹಸ್ಥಿತಿಯನ್ನು, ಮಾನಸಿಕವಾದ ಮಾರ್ಪಾಟುಗಳನ್ನು ಪರಿಶೋಧಿಸಿ, ಯೋಗ್ಯಚಿಕಿತ್ಸೆ ನಡೆಸುವೆವು. ಅನೇಕ ಬಗೆಯ ವೈದ್ಯಕೀಯ ಶೋಧಗಳು ಆಗಿರುವುದರಿಂದ ಇಂದಿನ ಸಮಾಜದಲ್ಲಿ ಶಿಶುಮರಣಗಳೂ, ತಾಯಂದಿರ ಸಾವೂ ಇಲ್ಲವಾಗಿವೆ."

" ಜನಿಸಿದ ಶಿಶುವೊಮ್ಮೊಮ್ಮೆ ರೋಗಗ್ರಸ್ತವಾಗಿದ್ದರೆ ? " ನಡುವೆ ನಾನು ಬಾಯಿ ಹಾಕಿದೆ.

" ಮಗು ರೋಗಗ್ರಸ್ತವಾಗಿರುವುದು ವಿರಳ. ವೈದ್ಯಕೀಯ ಪರಿಶೋಧನೆ ಶುಶ್ರೂಷೆಗಳು ರೋಗಗಳನ್ನೆಲ್ಲಾ ತೊಡೆದುಹಾಕಿವೆ. ಕಾಹಿಲೆಯಿಂದ ಕೂಡಿದ ಮಗು ನೂರಕ್ಕೆ ಒಂದೂ ಸಿಗದು. "

" ಅಪರೂಪವಾಗಿ ಒಂದು ಶಿಶು ಕಾಹಿಲೆಯುಳ್ಳದಾಗಿ ಜನಿಸಿದರೆ ಏನು ಮಾಡುವಿರಿ ? "

" ಮಾಡುವುದೇನು ? ಇತರ ಹಸುಳೆಗಳಿಗೆ ಸೋಂಕದ ಸಾಮಾನ್ಯ ಬೇನೆಯಾಗಿದ್ದರೆ, ವೈದ್ಯೋಪಚಾರಗಳಿಂದ ಗುಣಪಡಿಸುವೆವು. ಮಗುವಿನ ಬುದ್ಧಿ ಮತ್ತು ದೇಹ ಪ್ರಕೃತಿಗೆ ಹಾನಿಯನ್ನು ತಂದೊಡ್ಡಿ, ಮುಂದಿನ ಪೀಳಿಗೆಯಲ್ಲಿ ಎದ್ದು ಕಾಣುವ ಕುಂದು ಅದಾಗಿದ್ದರೆ, ಶಿಶುವನ್ನೇ ಇಲ್ಲವಾಗಿಸುವೆವು."

" ಶಿಶು ಹತ್ಯೆ ! ಪಾಪ ! " ಎಂದು ನಾನು ನಡುಗುತ್ತಾ ಹೇಳಿದೆ.

" ನೀನು ಹಳೆಯ ಅನಾಗರಿಕ ಮನುಷ್ಯನಂತೆ ಒದರುತಿರುವೆಯಲ್ಲ ! ಪಾಪವೆಂಬ ನುಡಿ ನಮ್ಮ ಭಾಷೆಯಲ್ಲೇ ಇಲ್ಲ. ಮಾನಸಿಕ ಮತ್ತು ಶಾರೀರಿಕ ಕೊರತೆಗಳಿಂದ ಕೂಡಿದ ವಿಕಲಾಂಗರು ಹೆಚ್ಚಿದರೆ ಮುಂದಿನ ಜನಾಂಗದಲ್ಲಿ ಅವರು ಒಂದು ಸಮಸ್ಯೆಯಾಗಿ ಪರಿಣಮಿಸುವರು. ಅಂತಹ ವೈಷಮ್ಯದ ಗಿಡವನ್ನು ಮೊಳಕೆಯಲ್ಲಿಯೇ ಚಿವುಟಿ ಹಾಕುವುದು ಜಾಣತನದ ಲಕ್ಷಣ. ಹಿಂದಿನ ಹಲವು ಶತಮಾನಗಳಲ್ಲಿ ರೋಗಗ್ರಸ್ತವಾದ ಅಂಗಗಳನ್ನೇ ಕತ್ತರಿಸಿ ಹಾಕುತಿದ್ದರು. ಈ ಬಗೆಯ ಶಸ್ತ್ರಚಿಕಿತ್ಸೆಯಿಂದ ಜನ ಸತ್ತರೆ ಅದನ್ನು ಯಾರೂ ಪಾಪವೆಂದು ಹೇಳುತಿರಲಿಲ್ಲ. ನಮ್ಮ ಕ್ರಮ ಶಸ್ತ್ರಚಿಕಿತ್ಸೆಗೇ ಹಾದಿಯನ್ನು ಕೊಡುವುದಿಲ್ಲ. ರೋಗಗಳನ್ನೆಲ್ಲಾ ಶಾಸ್ತ್ರೀಯ ರೀತಿಗಳಿಂದ ನಿವಾರಿಸಿದೇವೆ. "

ವಿಜ್ಞಾನಿಗಳ ನುಡಿಗೆ ಪ್ರತಿಕೇಗಲು ನನ್ನ ಬತ್ತಳಿಕೆಯಲ್ಲಿ ಕಣೆಗಳೇ ಇರಲಿಲ್ಲ. ಆದುದರಿಂದ ರೋಗಗ್ರಸ್ತ ಶಿಶುಹತ್ಯೆಯ ವಿಷಯ ಬಿಟ್ಟು ಬೇರೆಡೆಗೆ ಮಾತು ಹೊರಳಿಸಿದೆ. " ತಾಯಿ ಶಿಶುಮಂದಿರದಿಂದ ಹೊರಡುವಾಗ ಸಂಗಡ ಮಗುವನ್ನೊಯ್ಯುವಳು, ಅಲ್ಲವೆ ? "

" ಛೀ ಛೀ ! ಎಂತಹ ಮಾತುಗಳನ್ನಾಡುತಿರುವೆ. " ವಿಜ್ಞಾನಿಗಳು ಕಣ್ಣುಗಳನ್ನರಳಿಸಿದರು. " ಮಗು ಜನಾಂಗದ ಸಂಪತ್ತು. ಅದರ ಮೇಲೆ ತಾಯಿಗೆ ಯಾವ ಅಧಿಕಾರವೂ ಇಲ್ಲ. "

“ ಮಾತೆಯಿಂದ ಕಂದನನ್ನು ಕಸಿದುಕೊಳ್ಳುವುದು ಅನ್ಯಾಯ. ತಾಯಿಯೊಡಲಿನ ಪ್ರೀತಿಯೊಸೆಂಪರಿಯಲು ಮಗುವಿಗೆ ಅವಕಾಶವೇ ಸಿಗುವುದಿಲ್ಲ. ”

“ ಭಾವನೆಗಳ ಜಾಳಿಗೆಯಲ್ಲಿ ಬಿದ್ದು ನೇಲುವವರು ನಾವಲ್ಲ. ” ವಿಜ್ಞಾನಿಗಳು ನಗುತ್ತಾ ಉತ್ತರಿಸಿದರು. “ ಎಂಟು ಹತ್ತು ಶತಮಾನಗಳ ಹಿಂದೆ ಜನರಿಗೆ ಈ ಕಾಹಿಲೆ ಜೋರಾಗಿತ್ತು. ಆದರೆ ನಾವು ವಿಜ್ಞಾನಿಗಳು ಯಥಾರ್ಥವನ್ನರಿತುಕೊಂಡು ನಮ್ಮ ಸಮಸ್ಯೆಗಳನ್ನು ಬಿಡಿಸುವೆವು. ಶಿಶುಗಳನ್ನು ವೈಯಕ್ತಿಕ ಪೋಷಣೆಗೆ ಬಿಡುವುದಾದರೆ, ಎಲ್ಲ ಮಕ್ಕಳ ಬೆಳವಣಿಗೆ ಒಂದೇ ರೀತಿಯಲ್ಲಿರುವುದಿಲ್ಲ. ಭಿನ್ನ ಭಿನ್ನ ವಾತಾವರಣಗಳಲ್ಲಿ ಬೆಳೆದ ಶಿಶುಗಳು ಬೇರೆ ಬೇರೆ ಮನಸ್ಥಿತಿಯುಳ್ಳವಾಗುವುವು. ಎಳೆಯರಲ್ಲಿ ತೋರಬಹುದಾದ ಈ ಕಿರು ವೈಷಮ್ಯವೇ ಮುಂದೆ ವಿಶ್ವ ಜನಾಂಗದ ಏಕಹದಿಯನ್ನು ಸಡಿಲಿಸಬಹುದು. ಆದುದರಿಂದಲೇ ಮಕ್ಕಳನ್ನು ಪೋಷಿಸುವ ಹೊಣೆಯನ್ನು ಸರಕಾರ ತೆಗೆದುಕೊಂಡಿದೆ. ಅವರ ಮಾನಸಿಕ ಮತ್ತು ದೈಹಿಕ ವಿಕಾಸಗಳಿಗೆ ಎಲ್ಲ ಅವಕಾಶಗಳನ್ನೂ ಒದಗಿಸಿಕೊಟ್ಟಿದೆ. ”

“ ಆದರೆ ಸಮಾಜದಲ್ಲಿ ಮಕ್ಕಳಿಗೂ ಮಾತಾಪಿತರರಿಗೂ ಯಾವ ಬಗೆಯ ಸಂಬಂಧವೂ ಉಳಿವುದಿಲ್ಲವಲ್ಲ. ”

“ ತಾನು, ತಾಯಿತಂದೆಗಳು, ತನ್ನ ಕುಟುಂಬ ಈ ಕಿರು ಕಲ್ಪನೆಗಳೇ ಹಿಂದೆ ಮಾನವನ ಪ್ರಗತಿಗೆ ವಿಘ್ನಗಳಾದುವು ಎಂಬುದನ್ನು ಚರಿತ್ರೆ ಹೇಳುತಲಿದೆ. ನಾವೆಲ್ಲರೂ ಮಾನವರು, ಒಂದೇ ಸಂತತಿಯವರು ಎಂಬ ಭಾವನೆಗಲ್ಲದೆ ಇತರ ಪ್ರತಿಗಾಮೀ ಕಲ್ಪನೆಗಳಿಗೆ ವಿಶ್ವ ಜನಾಂಗ ಅವಕಾಶಗೊಡುವುದಿಲ್ಲ. ”

ಈಗ ನಾವು ಎರಡನೆಯ ಕಟ್ಟಡಕ್ಕೆ ಬಂದೆವು. ಇದು ಒಂದು ವರುಷ ಪ್ರಾಯದಿಂದ ಎರಡು ವರುಷಗಳ ವರೆಗಿನ ಶಿಶುಗಳ ವಸತಿಯಾಗಿತ್ತು. ಬಣ್ಣ ಬಣ್ಣದ ತೊಡಿಗೆಗಳನ್ನು ತೊಟ್ಟ ಹಸುಳೆಗಳು ಆಟಿಗಳಲ್ಲಿ ನಿರತರಾಗಿದ್ದುವು. ಅವರಿಗೆ ಆಡಲು ಕೊಟ್ಟ ಆಟಿಗೆಗಳು ಬಿಂಗಾಮ್, ವಿಮಾನ, ನೀರೆತ್ತುವ ಯಂತ್ರಗಳು ಇತ್ಯಾದಿ ವಿವಿಧ ಯಂತ್ರಗಳ ಮಾತೃಕೆಗಳಾಗಿದ್ದುವು. ವಿಶಾಲವಾದ ಕಟ್ಟಡದ ಉದ್ದಗಲಕ್ಕೂ ಹಸುಳೆಗಳು ಓಡಾಡುತ್ತಾ ಉಲ್ಲಾಸದಿಂದ ಆಟವಾಡುತಿದ್ದುವು. ಪ್ರತಿ ಹತ್ತು ಮಕ್ಕಳಿಗೆ ಒಬ್ಬಳಂತೆ ದಾದಿ ಮಕ್ಕಳ

ಜೆಂಗಾವಲಿಗಿರುತ್ತಿದ್ದಳು. ಮಕ್ಕಳು ಬಿದ್ದು ನೋವು ಮಾಡಿಕೊಳ್ಳದಂತೆ, ಅತ್ತು ರಂಪ ಮಾಡಿಕೊಳ್ಳದಂತೆ ಬೇಸರಗೊಳ್ಳದಂತೆ ನೋಡಿಕೊಳ್ಳುವುದು ದಾದಿಯರ ಕೆಲಸ. ಶಿಶುವೊಂದು ಬೇಸರಗೊಂಡಿತೆಂದರೆ ಸಾಕು, ದಾದಿಗೆ ಶಿಕ್ಷೆ ತಪ್ಪಿದ್ದಲ್ಲ. ಮಕ್ಕಳ ಉಡಿಗೆತೊಡಿಗೆಗಳು ಮೈಕೈಗಳು ನಿರ್ಮಲವಾಗಿರುವಂತೆ ಆಕೆ ಬಹು ಶ್ರಮ ವಹಿಸಬೇಕಾಗುತ್ತಿದ್ದಿತು. ಪ್ರತಿ ನಾಲ್ಕು ತಾಸುಗಳಿಗೊಮ್ಮೆ ಮಕ್ಕಳಿಗೆ ಆಹಾರ ಒದಗಿಸಬೇಕು, ದಿನಕ್ಕೆ ಒಮ್ಮೆಯಾದರೂ ಸ್ನಾನವಾಗಲೇಬೇಕು, ಹಗಲು ನಾಲ್ಕು ತಾಸಾದರೂ ಶಿಶು ನಿದ್ರಿಸಲೇಬೇಕು. ಮಕ್ಕಳಿಗೆ ಸ್ನಾನ ಮಾಡಿಸುವುದೆಂದರೆ ನಮ್ಮ ರೂಢಿಯಂತೆ ಬಿಸಿನೀರು ಮೈಮೇಲೆ ಸುರಿವುದಲ್ಲ. ಸ್ನಾನ ಮಾಡಲು ಅವರು ನೂತನ ವಿಧಾನವನ್ನು ಕಂಡುಹಿಡಿದಿದ್ದರು. ಅವರ ಸ್ನಾನಕ್ಕೆ ಇಪ್ಪತ್ತಡಿ ವಿಶಾಲವಾದ ಒಂದು ಕೊಟಡಿ, ಕೊಟಡಿಯ ಮೇಲ್ಭಾಗದಲ್ಲಿ ಹಾಗೂ ಗೋಡೆಗಳ ಪಕ್ಕದಲ್ಲಿ ನೂರಾರು ಸಣ್ಣ ಸಣ್ಣ ಕೊಳವೆಗಳಿದ್ದುವು. ಹೂಗಿಡಗಳಿಗೆ ನೀರೆರೆಯಲು ನಾವು ಉಪಯೋಗಿಸುವ ತೊಟ್ಟಿಗಳ ಬಾಯಿಯಂತೆ, ಕೊಳವೆಗಳ ಬಾಯಿಗಳು ನೂರಾರು ಸಣ್ಣ ಸಣ್ಣ ರಂಧ್ರಗಳಿಂದ ಕೂಡಿದುವಾಗಿದ್ದುವು. ದಾದಿಯೊಂದು ಗುಂಡಿಯನ್ನೊತ್ತಿದರೆ ಸಾಕು, ಕೋಣೆಯೊಳಗೆ ನಿಂತಿದ್ದ ಮಕ್ಕಳ ಮೇಲೆ ಮಳೆ ಹನಿಗಳಂತೆ ತುಂತುರ್ವನಿಗಳು ಬೀಳಲಾರಂಭವಾಗುವುವು. ಮಕ್ಕಳ ದೇಹಪ್ರಕೃತಿಗೆ ಅನುಕೂಲವೆನಿಸಿದ ಬಿಸಿನೀರಿನ ಮಳೆಯೇ ಅವರ ಮೈಮೇಲೆ ಬೀಳಲಾರಂಭವಾಗುವುದು. ನಮ್ಮಂತೆ ಮಕ್ಕಳ ಮೈಗಳಿಗೆ ಸಾಬೂನು ಉಜ್ಜುವುದಿಲ್ಲ. ಪಕ್ಕದ ಕೋಣೆಯ ನೆಲದ ಮೇಲೆ ಒಂದಂಗುಲದಷ್ಟು ದಪ್ಪವಾಗಿ ಸುವಾಸನೆಭರಿತವಾದ ಒಂದು ಬಗೆಯ ಪುಡಿಯನ್ನು ಹರಡಿರುವರು. ಮೈ ಒದ್ದೆಯಾದ ಮಕ್ಕಳು ಈ ಪುಡಿಯ ಮೇಲೆ ಹೊರಳಾಡುವರು ಪರಸ್ಪರ ಹಿಡಿದಾಡುವರು; ಅವರ ಮೈ ಬೆವರುವ ವರೆಗೆ ದಾದಿ ಈ ಪರಿ ಆಟವಾಡಲು ಬಿಡುವಳು. ಅನಂತರ ಸ್ನಾನದ ಮನೆಗೆ ಕರೆದುಕೊಂಡು ಹೋಗುವಳು. ಈಗ ತುಂತುರ್ವನಿಗಳ ಮಳೆಯಲ್ಲ; ದೊಡ್ಡ ದೊಡ್ಡ ಹನಿಗಳು ಉದುರುವುವು. ಈ ಹನಿಗಳು ಬಾಲಕರ ಮೈಗಳಿಗೆ ಅಂಟಿದ್ದ ಬಿಳಿ ಪುಡಿಯನ್ನೆಲ್ಲ ತೊಳೆಯುವುವು. ಅನಂತರ ದಾದಿ ಅವರನ್ನು ಕರೆದುಕೊಂಡು ಮೂರನೆಯ ಕೋಣೆಗೆ ಹೋಗುವಳು. ಇಲ್ಲಿ ಬಹು ಮೆದುವಾದ ಅರಿವೆಗಳನ್ನು ನೆಲದ ಮೇಲೆ ಹಾಸಿರುವರು. ಈ ವಸ್ತ್ರಗಳ ಮೇಲೆ ಎಳೆಯರು ಹೊರಳಾಡಲು ಅವರ ಮೈಗಳಿಗೆ ಅಂಟಿದ್ದ ನೀರೆಲ್ಲ ಒರೆಸಿಹೋಗುವುದು.

ನಾವು ಮೂರನೆಯ ಕಟ್ಟಡದಲ್ಲಿ ಪ್ರವೇಶಿಸಿದೆವು. ಇಲ್ಲಿ ಎರಡರಿಂದ ನಾಲ್ಕರ ವರೆಗಿನ ಪ್ರಾಯದ ಬಾಲಕರು ಇದ್ದರು. ಬಾಲಕರಿಗೆಲ್ಲ ಬಣ್ಣ ಬಣ್ಣದ ತೊಡಿಗೆಗಳು; ಆಟಿಕೆಗಳೂ ಇದ್ದುವು. ಆದರೆ ಇಲ್ಲಿನ ಆಟಿಕೆಗಳು ನಾವು ಮೊದಲು ನೋಡಿದುದಕ್ಕಿಂತ ಸ್ಪಷ್ಟವಾದುವು. ಕಟ್ಟಡದ ಸುತ್ತಲೂ ಸಣ್ಣದೊಂದು ರೈಲು ದಾರಿಯನ್ನು ನಿರ್ಮಿಸಿದ್ದರು. ಈ ದಾರಿಯ ಮೇಲೆ ಎಳೆಯರನ್ನು ಹೊತ್ತ ರೈಲುಗಾಡಿ ವಿದ್ಯುತ್ತಿನ ಬಲದಿಂದ ಓಡುತಿದ್ದಿತು. ಒಂದೆಡೆಯಲ್ಲಿ ನಲವತ್ತು ಗಜದಷ್ಟು ವಿಸ್ತಾರವಾದ ಒಂದು ಕೊಳ. ಕೊಳದಲ್ಲಿ ಸಣ್ಣ ಸಣ್ಣ ದೋಣಿಗಳು. ಎಳೆಯರು ದೋಣಿಗಳಲ್ಲಿ ಕುಳಿತು ವಿಹರಿಸುತಿದ್ದರು. ಬಾಲಕರ ಬೇಸರ ಕಳೆಯಲು ರೇಡಿಯೋ ಮೂಲಕ ಹಾಡುಗಳನ್ನು ಒದಗಿಸುತಿದ್ದರು. ಟೆಲಿವಿಷನ್ನಿನ ಮೂಲಕ ಚಿತ್ರ ಪ್ರದರ್ಶನಗಳೂ ನಡೆಯುತಿದ್ದುವು. ಪ್ರತಿಯೊಬ್ಬ ಬಾಲಕನಿಗೂ ಒಂದೊಂದು ಚಿತ್ರ ಪುಸ್ತಕವಿದ್ದಿತು. ಆದರೆ ಪುಸ್ತಕದಲ್ಲಿ ಮೃಗಪಕ್ಷಿಗಳ, ಗುಡ್ಡ ಬೆಟ್ಟಗಳ, ಮತ್ತು ಪರಿಸರದ ಹೂಗಳ ಚಿತ್ರಗಳಲ್ಲ ಇದ್ದುದು. ವಿಜ್ಞಾನಿ ನಿರ್ಮಿಸಿದ ಸಾವಿರಾರು ಬಗೆ ಯಂತ್ರಗಳ ಚಿತ್ರಗಳು ಆ ಪುಸ್ತಕಗಳಲ್ಲಿ ಅಡಕವಾಗಿದ್ದುವು. ಆ ಚಿತ್ರಗಳನ್ನು ನೋಡಿ ಬಾಲಕರು ಆನಂದಿಸುತಿದ್ದರು; ಅವುಗಳ ಆಕೃತಿಗಳನ್ನೇ ಗೋಡೆಗಳ ಮೇಲೂ ನೆಲದ ಮೇಲೂ ಬಣ್ಣ ಬಣ್ಣದ ಸುಣ್ಣಗಳಿಂದ ಬರೆಯುತಿದ್ದರು. ದಾದಿಯರು ಗೀಚುವುದನ್ನು ತಡೆಯುತಿರಲಿಲ್ಲ; ಬದಲಾಗಿ ಗೀಚಲು ಪ್ರೋತ್ಸಾಹ ನೀಡುತಿದ್ದರು. ಹೀಗೆ ಗೀಚುವುದರಿಂದ ಮಗುವಿನಲ್ಲಿ ಅಡಕವಾದ ಕ್ರಿಯಾತ್ಮಕ ಚೇತನ ಬೆಳಕಿಗೆ ಬರುತ್ತದೆ; ಅದನ್ನು ತಡೆಯಕೂಡದೆಂದು ವಿಜ್ಞಾನಿಗಳ ಅಭಿಪ್ರಾಯ. ಮಗು ಹುಟ್ಟಿದ ವೇಳೆಯನ್ನು ಗುರುತು ಮಾಡಿಕೊಂಡು ಜೋಯಿಸರು ಜಾತಕವನ್ನು ಬರೆಯುವಂತೆ, ಹಲವು ಮಂದಿ ಶಿಶು-ಮನಶ್ಶಾಸ್ತ್ರಜ್ಞರು ಮಗು ಗೋಡೆಗಳ ಮೇಲೆ ಗೀಚಿದ ಗೆರೆಗಳ ಅಚ್ಚುಗಳನ್ನು ತೆಗೆದುಕೊಂಡು ಹೋಗುತಿದ್ದರು. ಆ ಗೀಚಲು ಗೆರೆಗಳನ್ನು ಅನೇಕ ಯಾಂತ್ರಿಕ ಪರಿಶೋಧನೆಗಳಿಗೆ ಗುರಿಪಡಿಸಿ, ಮಗುವಿನ ಮಾನಸಿಕ ಬೌದ್ಧಿಕ ವಿಕಾಸಕ್ರಮವನ್ನೂ, ಯಾವ ಕಸುಬಿನ ಕಡೆಗೆ ಅದು ಒಲಿಯುತ್ತದೆ ಎಂಬುದನ್ನೂ ಗೊತ್ತುಹಚ್ಚುತಿದ್ದರು. ಮಗುವಿನ ಜೀವನಕ್ಕೆ ಸಂಬಂಧಿಸಿದ ಹತ್ತಾರು ಸಮಸ್ಯೆಗಳಿಗೆ ಉತ್ತರ ಕಂಡುಹಿಡಿಯುತಿದ್ದರು.

ಕೊನೆಯದಾಗಿ ನಾಲ್ಕನೆಯ ಕಟ್ಟಡದೊಳಗೆ ನುಗ್ಗಿದೆವು. ಇಲ್ಲಿ ನಾಲ್ಕ

"ಎಲ್ಲಾ ಪ್ರಯೋಗಶಾಲೆಗಳು ಇಲ್ಲಿಲ್ಲ." ಎಂದರವರು. "ಇದು ಶಕ್ತಿಯನ್ನು ಉತ್ಪಾದಿಸುವ ಕೇಂದ್ರ. ಇದಕ್ಕೆ ಸಂಬಂಧಿಸಿದ ಪ್ರಯೋಗ ಶಾಲೆಗಳು ಇಲ್ಲಿವೆ."

ನಮ್ಮಲ್ಲಿ ವಿದ್ಯುತ್ತನ್ನು ಉತ್ಪಾದಿಸುವ ಕೇಂದ್ರಗಳಂತೆ ಕಿವಿಗಳನ್ನು ಗಡಚಿಕ್ಕುವ ಸದ್ದು ಅಲ್ಲಿರಲಿಲ್ಲ. ರೋಗಿಗಳ ರುಗ್ಣಾಲಯದಲ್ಲಿ ತೋರಿಬರುವ ಶಾಂತತೆ ಅಲ್ಲಿ ಪಸರಿಸಿದ್ದಿತು. "ಶಕ್ತಿಯನ್ನು ಉತ್ಪಾದಿಸಲು ನಿಮ್ಮ ಊರಲ್ಲಿ ಜಲತಾಪಗಳಿಲ್ಲ. ಎಣ್ಣೆಯನ್ನು ಉಪಯೋಗಿಸುವಿರಾ?" ಎಂದು ನಾನು ವಿಜ್ಞಾನಿಗಳನ್ನು ಕೇಳಿದೆ.

"ಕಲ್ಲಿದ್ದಲು ಎಣ್ಣೆಗಳನ್ನು ಮನುಷ್ಯರು ಅನಾಗರಿಕರಾಗಿದ್ದಾಗ ಬಳಸುತ್ತಿದ್ದರು. ಸೂರ್ಯನೇ ಎಲ್ಲ ಶಕ್ತಿಗಳ ಉಗಮಸ್ಥಾನ. ಆದುದರಿಂದ ಶಕ್ತಿಯನ್ನು ಪಡೆಯಲು ಬೆಳಕನ್ನು ಕೊಡುವ ಸೂರ್ಯನನ್ನೇ ಬಳಸಿಕೊಳ್ಳುತ್ತಿದ್ದೇವೆ. ನಮಗೆ ಬೇಕಾದ ಕಾವು, ಶಕ್ತಿ ಮತ್ತು ಬೆಳಕುಗಳನ್ನು ಸೂರ್ಯನಿಂದಲೇ ಪಡೆಯುತ್ತಿದ್ದೇವೆ."

'ಇಲ್ಲಿ ಬಾ' ಎಂದು ವಿಜ್ಞಾನಿಗಳು ನನ್ನನ್ನು ಕಟ್ಟಡದ ಮೇಲ್ಚಾವಣಿಗೆ ಕರೆದುಕೊಂಡು ಹೋದರು. ಅಲ್ಲಿ ಇನ್ನೂರಡಿ ವಿಸ್ತೀರ್ಣವಾದ ಕನ್ನಡಿಯೊಂದನ್ನು ಐವತ್ತು ಅಡಿ ಎತ್ತರದ ಕಂಬಗಳ ಮೇಲೆ ನಿಲ್ಲಿಸಿದ್ದರು. ಸೂರ್ಯನ ಕಿರಣಗಳು ಈ ದೊಡ್ಡ ಕನ್ನಡಿಯನ್ನು ದಾಟಿ ಕೆಳಗಿರತಕ್ಕ ಸಣ್ಣ ಕನ್ನಡಿಯಲ್ಲಿ ಪ್ರವೇಶಿಸುತ್ತಿದ್ದುವು. ಕನ್ನಡಿಯ ಸುತ್ತಲೂ ಹತ್ತೆಂಟು ಯಂತ್ರಗಳು ಚಲಿಸುತ್ತಿದ್ದುವು. ಆ ಯಂತ್ರಗಳೆಲ್ಲ ಹೊಸ ಮಾದರಿಯವು. ಪ್ರತಿ ಯಂತ್ರದ ಬಳಿಯಲ್ಲಿಯೂ ಇಬ್ಬಿಬ್ಬರು ಕೆಲಸಗಾರರಿದ್ದರು. ಯಂತ್ರಗಳ ಚಲನೆಯನ್ನು ಅವರು ನೋಡಿಕೊಳ್ಳುತ್ತಿದ್ದರು. ಈ ಯಂತ್ರಗಳು ಎಸಗುತ್ತಿಹ ಕೆಲಸವೇನೆಂದು ತಿಳಿಯಲಿಲ್ಲ. ಬೆಪ್ಪನಂತೆ ನಾನು ವಿಜ್ಞಾನಿಗಳ ಮೊಗ ನೋಡಿದೆ. ಅವರು ನನ್ನ ಮನಸ್ಸಿನಲ್ಲಿದ್ದ ಅಭಿಪ್ರಾಯವೇನೆಂದು ಊಹಿಸಿದರು. "ನೋಡು ಇಲ್ಲಿ ಸೂರ್ಯಕಿರಣಗಳನ್ನು ಸೆರೆಹಿಡಿದು ಸಂಗ್ರಹಿಸುತ್ತಿದ್ದೇವೆ. ಮೇಲಿನದು ಭೂತಕನ್ನಡಿ. ಅದು ಕಿರಣಗಳನ್ನು ಕೇಂದ್ರೀಕರಿಸುತ್ತದೆ. ಕೆಳಗಿನ ಕನ್ನಡಿಯಲ್ಲಿ ಅವು ಹಾಯ್ದು ಹೋಗುವಾಗ, ಒಂದು ಕಾಲುವೆಯಲ್ಲಿ ಕಟ್ಟಿ ನಿಲ್ಲಿಸಿದ ನೀರನ್ನು, ಒಂದು ಸಣ್ಣ ಕಂಡಿಗಾಗಿ ಹರಿಯಲು ಬಿಟ್ಟಾಗ, ಆ ನೀರೆಷ್ಟು ಶಕ್ತಿಯಿಂದ ಧುಮುಕುವುದೋ, ಅದಕಿಂತಲೂ ಲಕ್ಷಪಾಲು ಶಕ್ತಿಯಿಂದ

ಕಿರಣಗಳು ಹೊರಹೊಮ್ಮುತ್ತವೆ. ಈ ಕಿರಣಗಳ ಕಾವು ಬಹು ತೀಕ್ಷ್ಣವಾದುದು. ಅವು ಯಾವ ಲೋಹವನ್ನಾದರೂ ನಿರಿಯೆ, ಅರ್ಧನಿಮಿಷದಲ್ಲಿ ಕರಗಿಸಿ ಆವಿಯಾಗಿಸಬಲ್ಲವು. ಇಲ್ಲಿ ಬಾ. ಪಕ್ಕದ ಕೋಣೆಯಲ್ಲಿ ಈ ಕಿರಣಗಳು ಶಕ್ತಿಯಾಗಿ ರೂಪಾಂತರವನ್ನು ಹೊಂದುವುದನ್ನು ನೋಡು."

ವಿಜ್ಞಾನಿಗಳ ಬೆನ್ನ ಹಿಂದೆಯೇ ನಾನು ಪಕ್ಕದ ಕೋಣೆಯೊಳಗೆ ಹೋದೆ. ಅದು ನೂರು ಅಡಿಗಳಿಗಿಂತ ಹೆಚ್ಚು ಉದ್ದವಾದುದು. ಇಲ್ಲಿಯೂ ಹತ್ತಾರು ಯಂತ್ರಗಳಿದ್ದುವು. ಪ್ರತಿಯೊಂದು ಯಂತ್ರದ ಬಳಿಯಲ್ಲಿಯೂ ಕೆಲಸಗಾರರು ನಿಂತಿದ್ದರು. ಕೇಂದ್ರೀಕೃತವಾದ ಕಿರಣಗಳು ಅನೇಕ ಯಂತ್ರಗಳಿಗಾಗಿ ದಾಟಿ ಹೋಗುವಾಗ ಶಕ್ತಿಯಾಗಿ ಪರಿವರ್ತನೆಯನ್ನೈದುತಿದ್ದುವು. ಅವುಗಳನ್ನು ವಿವರಿಸಿ ಹೇಳಲು ನನಗೆ ನುಡಿ ದೊರಕುವುದಿಲ್ಲ.

ಇಲ್ಲಿ ಈ ಯಂತ್ರಗಳನ್ನು ಒಬ್ಬ ವಿಜ್ಞಾನಿ ಬಂದು ಆಗಾಗ ಪರಿಶೋಧಿಸುತಿದ್ದ. ಯಂತ್ರಗಳ ಚಲನೆಯಲ್ಲಿ ಕೂದಲೆಳೆಯಷ್ಟು ತಪ್ಪಿದರೆ ಸಾಕು; ತತ್‌ಕ್ಷಣವೇ ವಿಜ್ಞಾನಿ ಅದನ್ನು ಸರಿಪಡಿಸುತಿದ್ದ. ವಿಜ್ಞಾನಿಗಳು ಪ್ರತಿಯೊಂದು ಯಂತ್ರದ ಕಡೆಗೂ ಬೆರಳು ತೋರಿಸುತ್ತಾ, ಅವು ಗೈವ ಕೆಲಸಗಳನ್ನು ವಿವರಿಸಿ ಹೇಳಿದರು. "ನೋಡು ಇಲ್ಲಿ ಕಿರಣಗಳು ಶಕ್ತಿಯಾಗಿ ಪರಿಣಮಿಸುತವೆ. ನೋಡು ಇಲ್ಲಿ ತಂತಿಗಳ ಮೇಲೆ ಹೊಳೆ ನೀರಿನಂತೆ ಶಕ್ತಿ ಹರಿಯತೊಡಗುತವೆ. ಇಲ್ಲಿ ಹೊಳೆಗೆ ಆಣೆಕಟ್ಟು ಹಾಕಿ ಜಲಾಶಯವನ್ನು ನಿರ್ಮಿಸಿದಂತೆ, ಉತ್ಪಾದಿತ ಶಕ್ತಿಯನ್ನು ಸಂಗ್ರಹಿಸಿಟ್ಟಿದೇವೆ."

ಅವರು ಹೇಳಿದುದು ಅರ್ಧಭಾಗ ನನಗೆ ಅರ್ಥವಾಯಿತು. ಉಳಿದ ಅರ್ಧ ಅರಿವಾಗಲಿಲ್ಲ. ಅವರು ನುಡಿಗಳನ್ನು ಮುಂದುವರಿಸಿದರು. "ಇದು ಮನುಷ್ಯನ ಎದೆಗುಂಡಿಗೆಯಂತಿದೆ. ಎದೆಗುಂಡಿಗೆ ಶರೀರದ ಸರ್ವಭಾಗಗಳಿಗೆ ರಕ್ತ ಒದಗಿಸಿಕೊಟ್ಟು, ದೇಹದ ಚಲನೆಗೆ ಕಾರಣವಾಗುವಂತೆ, ಈ ಕೇಂದ್ರ ಐವತ್ತು ಮೈಲು ಸುತ್ತಳತೆಯಲ್ಲಿರುವ, ಕೈಗಾರಿಕೆ, ಬೇಸಾಯ, ಇನ್ನು ಹಲವು ಬಗೆಯ ಯಾಂತ್ರಿಕೋದ್ಯಮಗಳಿಗೆ ಶಕ್ತಿಯನ್ನು ಒದಗಿಸುತದೆ. ಇಲ್ಲಿ ಏನಾದರೂ ಸ್ವಲ್ಪ ಅವ್ಯವಸ್ಥೆಯುಂಟಾದರೆ ಸಾಕು; ಈ ಕೇಂದ್ರದ ಎಲ್ಲಾ ಬಗೆಯ ಚಟುವಟಿಕೆಗಳು ಅಡಿಮೇಲಾದಂತೆಯೇ ಸರಿ."

"ನೀವು ಕಲ್ಲಿದ್ದಲು ಪೆಟ್ರೋಲುಗಳ ಉಪಯೋಗವನ್ನು ಪೂರ್ತಿಯಾಗಿ ಬಿಟ್ಟಿರುವಿರೇ ?" ನಾನು ನಡುವೆ ಬಾಯಿ ಹಾಕಿದೆ.

“ ನೀನು ಹೇಳಿದ ಖನಿಜಗಳನ್ನು ಪೂರ್ತಿಯಾಗಿ ತ್ಯಜಿಸಿದೇವೆಂದು ಹೇಳಲಾಗುವುದಿಲ್ಲ. ಭೂಮಿಯಲ್ಲಿ ಮೊದಲಿನಂತೆ ಖನಿಜ ಸಂಪತ್ತು ವಿಪುಲ ವಾಗಿಲ್ಲ. ನಾಲ್ಕು ಶತಮಾನಗಳ ಹಿಂದೆ ಉಂಟಾದ ಭಯಂಕರ ಭೂಕಂಪ ಜ್ವಾಲಾಮುಖಿಗಳ ಪರಿಣಾಮವಾಗಿ ಅಮೇರಿಕೆಯಲ್ಲಿದ್ದ ಎಣ್ಣೆ ಬಾವಿಗಳೆಲ್ಲ ಬತ್ತಿಹೋದುವು. ಈಗಿರುವ ಎಣ್ಣೆಯನ್ನೇ ನಾವು ಬಳಸತೊಡಗಿದರೆ, ಇನ್ನು ಹತ್ತು ಶತಮಾನಗಳಲ್ಲಿ ಎಣ್ಣೆಯೇ ಇಲ್ಲವಾಗಬಹುದು. ಆದುದರಿಂದ ಎಣ್ಣೆ ಕಲ್ಲಿದ್ದಲುಗಳಿಂದ ಶಕ್ತಿಯನ್ನು ಉತ್ಪಾದಿಸಲು ನಾವು ವಿಶೇಷ ಗಮನಕೊಡುವು ದಿಲ್ಲ. ಎಲ್ಲಿ ಕಲ್ಲಿದ್ದಲು ಮತ್ತು ಎಣ್ಣೆಗಳು ದೊರಕುವುವೋ, ಅಲ್ಲಿ ಮಾತ್ರ ಅವುಗಳನ್ನು ಬಳಸುತಾರೆ. ಇತರ ಎಡೆಗಳಲ್ಲೆಲ್ಲಾ ನಾವು ಸೂರ್ಯನನ್ನೇ ಆಶ್ರಯಿಸುತ್ತೇವೆ.”

ಮೂರನೆಯ ವಿಭಾಗದಲ್ಲಿ ಸಂಗ್ರಹಿಸಿಟ್ಟ ಶಕ್ತಿಯನ್ನು ತಂತಿಗಳ ಮೂಲಕ ನಾಡಿನ ವಿವಿಧ ಭಾಗಗಳಿಗೆ ಒಯ್ಯುವ ಏರ್ಪಾಡು ನಡೆದಿತ್ತು. ಸಾವಿರಾರು ತಂತಿಗಳು ಅಲ್ಲಿಂದ ಹೊರಟು ದಿಕ್ಕು ದಿಕ್ಕುಗಳಿಗೆ ಪಸರಿಸಿದ್ದುವು. ಈ ಸರಿ ಗೆಗಳ ಮಾಲೆಯನ್ನು ನೋಡುತ್ತಾ ನಾನು ಹೇಳಿದೆ. “ತಂತಿಗಳಿಲ್ಲದೆ ಶಕ್ತಿ ಯನ್ನು ಬೇರೆಡೆಗಳಿಗೆ ಒಯ್ಯಲಾಗುವುದಿಲ್ಲವೇ ? ”

“ ಅದೇ ಸಂಶೋಧನೆಯಲ್ಲಿ ನಾವಿದ್ದೇವೆ.” ವಿಜ್ಞಾನಿಗಳು ಉಸುರಿ ದರು. “ಬಾನುಲಿಯಂತೆ, ಟೆಲಿವಿಷನ್ನಿನಂತೆ, ತಂತಿಗಳನ್ನು ಬಳಸದೆ ಶಕ್ತಿ ಯನ್ನು ವಿಸರಣೆ ಮಾಡಲು ಸಾಧ್ಯವಿದೆಯೇ ಎಂಬುದು ನಮ್ಮ ಮುಂದಿನ ಪ್ರಶ್ನೆಯಾಗಿದೆ. ಅದನ್ನು ಬಗೆಹರಿಸಲು ನಾವು ಅನೇಕ ಸಂಶೋಧನೆಗಳನ್ನು ನಡೆಸಿದ್ದೇವೆ. ಆದರೆ ಅದು ಅತಿ ಮಹತ್ವದ ಸಮಸ್ಯೆಯಲ್ಲ. ಈ ತಂತಿಗಳ ನ್ನೆಲ್ಲ ಹಾಕಿ ಮೂರು ನಾಲ್ಕು ಶತಮಾನಗಳಾದುವು. ಇನ್ನೊಂದು ಆರೇಳು ಶತಮಾನಗಳ ತನಕ ಹಾಳಾಗವು. ನೆಲದ ಬಸಿರಲ್ಲಿ ಕಬ್ಬಿಣ ಮತ್ತು ತಾಮ್ರಗಳ ಅದರುಗಳು ಇನ್ನೂ ವಿಪುಲವಾಗಿಯೇ ಉಳಿದಿವೆ.”

“ ಈ ಕಲಸಗಾರರು ದಿನವೆಲ್ಲ ದುಡಿಯುತಿರಬೇಕೆ ? ”

“ ದಿನವೆಲ್ಲ ದುಡಿಯಲು ಇವರೇನು -ಗಾಣದ ಎತ್ತುಗಳೇ ? ಶಕ್ತಿ ಮೀರಿ ಮನುಷ್ಯನಿಂದ ದುಡಿಸಿಕೊಳ್ಳುವುದು ಹಿಂದಿನ ಭಂಡವಾಳ ಸಂಸ್ಕೃತಿಗೆ ಸೇರಿದುದು. ನಮ್ಮ ಸಮಾಜದಲ್ಲಿ ದಿನಕ್ಕೆ ನಾಲ್ಕು ತಾಸುಗಳಿಗಿಂತ ಹೆಚ್ಚು

ಯಾರೂ ದುಡಿಯಬೇಕಾಗಿಲ್ಲ. ಅವರ ವೇಳೆ ಮುಗಿದೊಡನೆಯೇ ಬೇರೊಂದು ಬಣದವರು ಬಂದು ಆ ಕೆಲಸವನ್ನು ನೋಡಿಕೊಳ್ಳುವರು."

ನಾವು ಶಕ್ತಿ ಉತ್ಪಾದನೆಯ ಕೇಂದ್ರವನ್ನೂ, ಅದರ ವಿವಿಧ ಶಾಖೋಪ ಶಾಖೆಗಳನ್ನೂ, ಅದಕ್ಕೆ ಸಂಬಂಧಿಸಿದ ಪ್ರಯೋಗಶಾಲೆಗಳನ್ನೂ ನೋಡಿದೆವು. ಸೂರ್ಯಕಿರಣಗಳ ಕೇಂದ್ರೀಕರಣ, ಅವುಗಳನ್ನು ಶಕ್ತಿಯಾಗಿ ಪರಿವರ್ತಿಸುವುದು, ಶಕ್ತಿಯ ವಿಸರಣೆ ಮೊದಲಾದ ವಿಭಾಗಗಳಲ್ಲಿ ಅನೇಕ ವಿಜ್ಞಾನಿಗಳು ಸಂಶೋಧನೆ ನಡಸುತಿದ್ದರು; ಶಕ್ತಿಯನ್ನು ಸುಲಭ ರೀತಿಯಲ್ಲಿ ಉತ್ಪಾದಿಸುವ ಬಗೆಗಳನ್ನು ಅರೈಯುತಿದ್ದರು.

ಹೊಸದೊಂದು ಎಡೆಗೆ ವಿಜ್ಞಾನಿಗಳು ನನ್ನನ್ನು ಕರೆಕೊಂಡು ಬಂದರು. ಇಲ್ಲೊಂದು ಹಿರಿಯ ಜಲಾಶಯವಿದ್ದಿತು. ಅದು ಹತ್ತು ಮೈಲುಗಳಷ್ಟು ಉದ್ದವಾಗಿಯೂ ಏಳು ಮೈಲುಗಳಷ್ಟು ಅಗಲವಾಗಿಯೂ ಇದ್ದಿತು. ಸ್ಫಟಿಕದಂತಹ ಸ್ವಚ್ಛ ಶೀತಲ ಸ್ವಾದೋದಕ ಅದರಲ್ಲಿ ತುಂಬಿ ತುಳುಕುತಿದ್ದಿತು. ತಟಾಕದ ದಡದಲ್ಲಿ ಹತ್ತಾರು ಯಂತ್ರಗಳು ಕೆಲಸ ಮಾಡುತಿದ್ದುವು. ನಗರಕ್ಕೆ ನೀರನ್ನೊದವಿಸುವ ಜಲಾಶಯ ಇದಾಗಿರಬಹುದೆಂದು ನಾನು ಭಾವಿಸಿದೆ. "ಇದೇನು ಸ್ವಾಭಾವಿಕವಾದ ತಟಾಕವೇ ? " ಎಂದು ನಾನು ವಿಜ್ಞಾನಿಗಳ ಮೊಗ ನೋಡಿದೆ.

"ಸ್ವಾಭಾವಿಕ ತಟಾಕಗಳು ಎಲ್ಲಿಂದ ಬರಬೇಕು? ನಾಲ್ಕೆಂಟು ಶತಮಾನಗಳ ಹಿಂದೆ ಇದ್ದ ಸರೋವರಗಳು ಬತ್ತುತ್ತಾ ಬಂದಿವೆ."

"ಇದು ಕೃತ್ರಿಮ ಜಲಾಶಯವೇ ? ಯಾವುದಾದರೂ ಒಂದು ಕಿರುತೊರೆಗೆ ಅಣೆಕಟ್ಟು ಹಾಕಿ ಈ ತಟಾಕವನ್ನು ನಿರ್ಮಿಸಿದಿರಾ ? "

"ಇಲ್ಲ." ಎಂದು ವಿಜ್ಞಾನಿಗಳು ತಲೆಯನ್ನಲುಗಿಸಿದರು. "ಕಿರುತೊರೆಯೂ ಇಲ್ಲ; ಅಣೆಕಟ್ಟನ್ನೂ ಕಟ್ಟಿಲ್ಲ. ನಮ್ಮ ವೈಜ್ಞಾನಿಕ ಯುಗದ ಎರಡನೆ ಸಾಹಸ ಇದು ! "

ಅಚ್ಚರಿಯ ಅಲೆಯೊಂದು ನನ್ನ ಎದೆಯಲ್ಲಿ ಸುಳಿದಿತು. ನಾನು ಮಾತಾಡದೆ ವಿಜ್ಞಾನಿಗಳ ಮೊಗವನ್ನು ದಿಟ್ಟಿಸಿದೆ.

"ನೋಡು, ಈ ಗೋಳದಲ್ಲಿ ಜನಸಂಖ್ಯೆ ಹೆಚ್ಚಿದೊಡನೆ ಕಾಡುಗಳೂ ಇಲ್ಲವಾದುವು. ಜನತಾ ಸಂಸ್ಕೃತಿಯ ಯುಗದಲ್ಲಿ ನೆಲವೆಲ್ಲವನ್ನೂ ವ್ಯವಸಾಯ ಯೋಗ್ಯವಾಗಿ ಮಾಡಬೇಕೆಂಬ ಹುಚ್ಚುಹುಮ್ಮಸದಿಂದ ಬೆಟ್ಟ ಗುಡ್ಡಗಳನ್ನು

ಕಡಿದು ಬಯಲುಮಾಡಿದರು. ಪರಿಣಾಮವಾಗಿ ಕಾಲಕಾಲಕ್ಕೆ ಒದಗುತ್ತಿದ್ದ ಮಳೆ ಇಲ್ಲವಾಯಿತು. ಇಡೀ ಪ್ರಪಂಚವನ್ನೇ ಪ್ರಚಂಡ ಬರಗಾಲ ಬಾಧಿಸುವಂತೆ ತೋರಿತು. ಆಗ ನಮ್ಮ ಮುತ್ತಜ್ಜಂದಿರಾದ ವಿಜ್ಞಾನಿಗಳು ಮಳೆ ಮೋಡಗಳನ್ನು ಸೆರೆವಿಡಿದು ಮಳೆಗರೆಯಿಸುವ ಯಂತ್ರಗಳನ್ನು ನಿರ್ಮಾಣ ಮಾಡಿದರು. ಆದರೆ ಈ ಪ್ರಯತ್ನದಿಂದಲೂ ಭೂಮಿಯಲ್ಲಿನ ನೀರಿನ ಅಭಾವ ನಿವಾರಣೆ ಹೊಂದಲಿಲ್ಲ. ಎಲ್ಲೆಡೆಗಳಲ್ಲಿಯೂ ಮಳೆನೀರನ್ನು ಸೆರೆವಿಡಿದು ಕೃತ್ರಿಮ ಜಲಾಶಯಗಳನ್ನು ನಿರ್ಮಿಸುವುದು ಅಸದಳವೆನಿಸಿತು. ಜನಸಂಖ್ಯೆ ಹೆಚ್ಚಿತು; ಪಯಣಿಗರ ಸಂಖ್ಯೆ ಮಿತಿಮೀರಿತು. ಒಂದೂರಿನಿಂದ ಇನ್ನೊಂದೂರಿಗೆ ಹೊಸ ಹೊಸ ದಾರಿಗಳನ್ನು ನಿರ್ಮಿಸುವ ಸಮಸ್ಯೆ ಎದ್ದಿತು. ಹೀಗಿರಲು ನೀರಿನ ಕೊರತೆಯನ್ನು ಇಲ್ಲವಾಗಿಸಲು, ಹೊಸ ದಾರಿಗಳನ್ನು ನಿರ್ಮಿಸಲು ವಿಜ್ಞಾನಿಗಳು ನೂತನ ಸಂಶೋಧನೆಗಳನ್ನು ಕೈಗೊಂಡರು. ಹೊಸ ಸಂಶೋಧನೆಗಳಿಂದ ನೆಲದಡಿಯಲ್ಲಿರುವ ಜಲಪ್ರವಾಹಗಳನ್ನು ಆರಯ್ದು, ಅವನ್ನು ಮೇಲಕ್ಕೆತ್ತುವ ಯಂತ್ರಗಳು ಉದಯವಾದುವು. ಇಲ್ಲಿ ನೋಡು, ಈ ಯಂತ್ರಗಳು ನೆಲದಡಿಯ ಜಲಪ್ರವಾಹಗಳನ್ನು ಮೇಲಕ್ಕೆತ್ತುತ್ತವೆ. ಈ ತಟಾಕದಲ್ಲಿ ನೀರನ್ನು ಸಂಗ್ರಹಿಸುತ್ತವೆ. ಐವತ್ತು ಮೈಲುಗಳು ಅಂತರದೊಳಗಿನ ಎಲ್ಲಾ ಕಾಲುವೆಗಳಿಗೂ ಈ ತಟಾಕವೇ ನೀರನ್ನು ಒದಗಿಸುತ್ತದೆ; ಬೇಸಾಯಕ್ಕೆ ಈ ಜಲಾಶಯವೇ ಆಧಾರ."

"ಭೂಮಿಯೊಳಗಿನ ಜಲಪ್ರವಾಹಗಳು ಬತ್ತವೇ?" ನಾನು ನುಡಿದೆ. "ಆಗ ಭೂಮಂಡಲವೇ ಒಂದು ಹಿರಿಯ ಮರುಭೂಮಿಯಾಗಬಹುದು."

"ಆ ಕಾಲ ಬಹು ದೂರದಲ್ಲಿದೆ." ವಿಜ್ಞಾನಿಗಳು ಮಾರ್ನುಡಿದರು. "ಈಗ ನಾವು ಬಳಸುವ ನೀರಿಗಿಂತ ಹೆಚ್ಚಾಗಿ ಮಳೆ ದೊರೆಯುತ್ತದೆ. ಮಳೆ ನಮ್ಮ ಅಂಕೆಯಲ್ಲಿರುವನಕ ನೆಲದೊಳಗಿನ ಜಲಪ್ರವಾಹಗಳು ಬತ್ತವು. ಮುಂದೆ ಭೂಕಂಪ, ಪ್ರಕೃತಿಯಲ್ಲಿ ಆಗಬಹುದಾದ ವ್ಯತಿಚಲನೆಗಳು ಇವುಗಳಿಂದ ನಮಗೆ ದೊರಕುವ ಮಳೆಯ ಪ್ರಮಾಣ ಕಡಿಮೆಯಾಗಬಹುದು. ಆದರೆ ಕಡಲುಗಳೂ ಸಾಗರಗಳೂ ಇವೆಯಲ್ಲ."

"ಆದರೆ ಕಡಲಿನ ನೀರು ಉಪ್ಪು."

"ದೊಡ್ಡ ಪ್ರಮಾಣದಲ್ಲಿ ಕಡಲ ನೀರನ್ನು ಬತ್ತಿಸಿ ಸಿಹಿ ನೀರನ್ನು ಪಡೆವ ಪ್ರಯೋಗಗಳು ಕರೆನಾಡಿನಲ್ಲಿ ನಡೆದಿವೆ. ಒಂದು ನಿಮಿಷದಲ್ಲಿ ಹತ್ತು ಸಾವಿರ

ಘನ ಅಡಿ ಸಿಹಿ ನೀರನ್ನು ಕಡಲಿನಿಂದ ತಗೆಯುವ ಯಂತ್ರಗಳು ನಿರ್ಮಿತವಾಗಿವೆ. ಸಮುದ್ರ ತೀರದ ನಗರಗಳಲ್ಲಿ ಈ ಯಂತ್ರಗಳನ್ನೇ ಉಪಯೋಗಿಸಿ ಸಿಹಿ ನೀರು ಪಡೆಯುತಿದ್ದಾರೆ. ಕಡಲುಗಳೂ ಸಾಗರಗಳೂ ಬತ್ತಬೇಕಾದರೆ ಲಕ್ಷಾಂತರ ವರುಷಗಳು ಬೇಕು. ಆ ಕಾಲದಲ್ಲಿ ಪ್ರಪಂಚದಲ್ಲಿ ಮಾನವನೇ ಇರುವುದಿಲ್ಲ. ಮಾನವ ಸಮಾಜದ ಇತಿಹಾಸ ಆ ವೇಳೆಗೆ ಕೊನೆಗೊಂಡಿರುತ್ತದೆ.''

ವಿಜ್ಞಾನಿಗಳು ತಟಾಕದ ಪಕ್ಕದಲ್ಲಿರುವ ಒಂದು ಮಂದಿರದೊಳಗೆ ನನ್ನನ್ನು ಕರೆದೊಯ್ದರು. ನೆಲದಡಿಯಿಂದ ಜಲಪ್ರವಾಹಗಳನ್ನು ಮೇಲಕ್ಕೆತ್ತುವ ನೂತನ ಬಗೆಗಳನ್ನು ಅರಯಲು, ಆ ಮಾರ್ಗಗಳನ್ನು ಸುಲಭವಾಗಿಸಲು ಸಂಶೋಧನೆಗಳನ್ನು ನಡೆಸಲಿಹ ಪ್ರಯೋಗಶಾಲೆ ಅದಾಗಿತ್ತೆಂದು ಹೇಳ ಬಹುದು. ಒಳಗೆ ಹಲವು ಬಗೆಯ ಯಂತ್ರಗಳ ಮತ್ತು ಸಕಾಶಿಗಳ ಮುಂದೆ ಕುಳಿತು ನಾಲ್ಕಾರು ಮಂದಿ ವಿಜ್ಞಾನಿಗಳು ಪರಿಶೋಧನೆಗಳನ್ನು ನಡೆಸುತಿದ್ದರು. ಅವರು ಯಾವ ಬಗೆಯ ಸಂಶೋಧನೆ ನಡೆಸುತಿದ್ದರೆಂಬುದು ನನಗೆ ತಿಳಿಯದು. ಗೋಡೆ ತುಂಬ ಭೂಪಟಗಳನ್ನು ತೂಗು ಹಾಕಿದ್ದರು. ಈ ಪಟಗಳಲ್ಲಿ ನೆಲದಡಿಯ ಜಲಪ್ರವಾಹಗಳನ್ನು ಗುರುತಿಸಿದ್ದರು. ಈ ಜಲ-ಪ್ರವಾಹದ ದಾರಿಗಳು ಮನುಷ್ಯ ಶರೀರದಲ್ಲಿ ಪಸರಿಸಿದ ಲಕ್ಷಾಂತರ ನರತಂತು ಗಳಂತೆ ಪಟದ ಮೇಲೆಲ್ಲಾ ಪಸರಿಸಿದ್ದುವು. ಯಂತ್ರಗಳ ಮೂಲಕ ನೀರನ್ನು ನೆಲದಡಿಯಿಂದ ಮೇಲಕ್ಕೆತ್ತುವ ಕೇಂದ್ರಗಳನ್ನು ಪಟದ ಮೇಲೆ ಗುರುತಿಸಿದ್ದರು. ಪ್ರತಿ ಐವತ್ತು ಮೈಲುಗಳಿಗೆ ಒಂದೊಂದರಂತೆ ಕೇಂದ್ರಗಳನ್ನು ಸ್ಥಾಪಿಸಿ ತಟಾಕಗಳನ್ನು ನಿರ್ಮಿಸಿದ್ದರು. ಈ ಜಲಾಶಯಗಳು ತಮ್ಮ ಪರಿಧಿಯಲ್ಲಿರುವ ಎಲ್ಲ ಕಾಲುವೆಗಳಿಗೂ, ಬೇಸಾಯಕ್ಕೂ ನೀರನ್ನು ಒದವಿಸುತಿದ್ದುವು. ಬೇರೊಂದು ಭೂಪಟದಲ್ಲಿ ಆಯಾ ಕೇಂದ್ರಕ್ಕೆ ಸೇರಿದ ಕಾಲುವೆಗಳನ್ನು ಚಿತ್ರಿಸಿದ್ದರು. ಈ ಕಾಲುವೆಗಳಿಂದ ಜನಾಂಗಕ್ಕೆ ಎರಡು ಬಗೆಯ ಪ್ರಯೋಜನಗಳಿದ್ದುವು. ಒಂದನೆಯದು ಸಂಚಾರ ಸೌಕರ್ಯ; ಎರಡನೆಯದು ವಿಶಾಲವಾದ ವ್ಯವಸಾಯ ಕ್ಷೇತ್ರಗಳಿಗೆ ನೀರನ್ನು ಒದಗಿಸುವುದು.

ವಿಜ್ಞಾನಿಗಳು ನನ್ನನ್ನು ಆಹಾರ ವಿಭಾಗದ ಕೈಗಾರಿಕೆಗಳ ಕ್ಷೇತ್ರಕ್ಕೆ ಕರೆದುಕೊಂಡು ಹೋದರು. ಈ ಉದ್ಯಮಗಳನ್ನು ಕೈಗಾರಿಕೆಗಳೆಂದು ಕರೆಯುವುದು ತಪ್ಪು. ಈ ಉದ್ಯೋಗಗಳಲ್ಲಿ ಮನುಷ್ಯನನ್ನು ಸಾವಿರದಲ್ಲಿ ಒಂದು ಪಾಲು ಸಹ ಉಪಯೋಗಿಸುವುದಿಲ್ಲ. ಎಲ್ಲ ದುಡಿಮೆಗಳನ್ನೂ ಯಂತ್ರಗಳೇ

ಎಸಗುತ್ತಲಿವೆ. ಈ ವಿಭಾಗದಲ್ಲಿ ಹತ್ತು ದೊಡ್ಡ ಕಟ್ಟಡಗಳಿದ್ದುವು. ಆ ಕೇಂದ್ರದಲ್ಲಿರುವ ಜನರಿಗೆಲ್ಲ ಅಗತ್ಯವೆನಿಸಿದ ಆಹಾರಗಳು ಇಲ್ಲಿಯೇ ಸಿದ್ಧವಾಗುತ್ತಿದ್ದುವು. ಉದ್ಯಮಗಳೊಡನೆ, ಆಹಾರ ವಿಜ್ಞಾನಕ್ಕೆ ಸಂಬಂಧಿಸಿದ ಸಂಶೋಧನೆಗಳಾದರೂ ಪ್ರಯೋಗಶಾಲೆಗಳಲ್ಲಿ ನಡೆಯುತ್ತಿದ್ದುವು. ನಮ್ಮ ಮರಿಮಕ್ಕಳ ಉದ್ಯಮ ಬೇರೆ, ಸಂಶೋಧನೆ ಬೇರೆ ಎಂದು ಪರಿಗಣಿಸಿರಲಿಲ್ಲ. ಒಬ್ಬ ಮನುಷ್ಯನಿಗೆ ಎರಡು ತೋಳುಗಳಿದ್ದಂತೆ, ಉದ್ಯೋಗ ಮತ್ತು ಸಂಶೋಧನೆಗಳು ಜೀವನದ ಎರಡು ಮುಖಗಳೆಂದು ಅವರು ಭಾವಿಸಿದ್ದರು. ಆದುದರಿಂದ ದಿನದಿನಕ್ಕೂ ಯಾಂತ್ರಿಕ ಉದ್ಯಮಗಳ ಮುಖ ಮಾರ್ಪುಗೊಳ್ಳುತ್ತಿದ್ದಿತು. ಹಳೆಯ ರೂಢಿ ಪರಂಪರೆಗಳು ಇಲ್ಲವಾಗುತ್ತಿದ್ದುವು; ಹೊಸ ಪರಂಪರೆಗಳು ಅಡಿಯಿಡುತ್ತಿದ್ದುವು.

ಆ ಕೇಂದ್ರದಲ್ಲಿ ಬೆಳೆದ ದವಸ ಧಾನ್ಯಗಳೆಲ್ಲ ಆಹಾರ ವಿಭಾಗದಲ್ಲಿ ಸಂಗ್ರಹವಾಗಿದ್ದುವು. ಮನುಷ್ಯನಿಗೆ ಅಗತ್ಯವೆನಿಸಿದ ಇತರ ಧಾನ್ಯಗಳನ್ನು, ಆ ಪ್ರದೇಶದಲ್ಲಿ ದೊರೆಯದುದು, ಅಲ್ಲಿಗೆ ತರಿಸಿಕೊಳ್ಳುತ್ತಿದ್ದರು. ನೂರಾರು ಬಗೆಯ ಯಂತ್ರಗಳು ದವಸ ಧಾನ್ಯಗಳನ್ನು ಕೇರಿ ಹಸನಾಗಿಸುತ್ತಿದ್ದವು, ಧಾನ್ಯಗಳನ್ನು ಮಿದಿದು ಹೊಟ್ಟು ತಿರುಳುಗಳನ್ನು ವಿಂಗಡಿಸುತ್ತಿದ್ದುವು. ಬೇರೊಂದೆಡೆಯಲ್ಲಿ ಸಿದ್ಧವಾದ ಧಾನ್ಯಗಳನ್ನು ವಿದ್ಯುತ್ತಿನ ಒಲೆಗಳಲ್ಲಿ ಯಂತ್ರಗಳು ಹುರಿಯುತ್ತಿದ್ದುವು; ಬೇಯಿಸುತ್ತಿದ್ದುವು. ಮೂರನೆಯ ಎಡೆಯಲ್ಲಿ ವಿದ್ಯುತ್ತಿನ ಅರೆಯುವ ಕಲ್ಲುಗಳು ಧಾನ್ಯಗಳನ್ನು ಅರೆದು ನುಣ್ಣಗಿನ ಹಿಟ್ಟುಗಳಾಗಿ ರೂಪಾಂತರಗೊಳಿಸುತ್ತಿದ್ದುವು. ಕೊನೆಗೊಂದು ಸ್ಥಳದಲ್ಲಿ ಬೇರೆ ಬೇರೆ ಪ್ರಮಾಣಗಳಲ್ಲಿ ಹಿಟ್ಟುಗಳನ್ನು ಬೆರಸಿ, ಯಂತ್ರಗಳು ಗಜ್ಜುಗದ ಗಾತ್ರದ ಗುಳಿಗೆಗಳನ್ನೂ ಬಿಸ್ಕೆಟ್ಟುಗಳನ್ನೂ ಮಾಡಿ ಡಬ್ಬಿಗಳಲ್ಲಿ ತುಂಬುತ್ತಿದ್ದುವು. ಈ ಡಬ್ಬಿಗಳು ದೋಣಿ, ಬಿಂಗಾಮ್, ಮೊದಲಾದ ವಾಹನಗಳ ಮೂಲಕ ಆ ಕೇಂದ್ರದಲ್ಲಿರುವ ವಿವಿಧ ಭೋಜನ ಶಾಲೆಗಳಿಗೆ ಒಯ್ಯಲ್ಪಡುತ್ತಿದ್ದುವು. ಸುಮಾರು ಹತ್ತು ಲಕ್ಷ ಜನರಿಗೆ ಬೇಕಾದ ಆಹಾರ ಇಲ್ಲಿ ತಯಾರಾಗುತ್ತಿದ್ದಿತು.

ಆಹಾರ ವಿಭಾಗದಲ್ಲಿ ಜರಗುತ್ತಿದ್ದ ಕಾರ್ಯಗಳನ್ನು ನೋಡಿ ನನಗೆ ಆಶ್ಚರ್ಯವಾಯಿತು. ಆಹಾರ ವಿಭಾಗದಿಂದ ಬಂದ ಗುಳಿಗೆ ಮತ್ತು ಬಿಸ್ಕೆಟ್ಟುಗಳಲ್ಲದೆ ಇತರ ಬಗೆಯ ಆಹಾರ ಜನರಿಗೆ ದೊರಕುವುದು ಅಸದಳವಾಗಿತ್ತು. ವಿಜ್ಞಾನಿಗಳ ಈ ಯೋಜನೆಯಿಂದ ಮನುಷ್ಯನಿಗೆ ತನ್ನ ನಾಲಗೆಯೊಪ್ಪುವ

ರುಚಿಯ ಆಹಾರವನ್ನು ಸೇವಿಸಲಾಗುತ್ತಿರಲಿಲ್ಲ. ವಿಜ್ಞಾನಿಗಳು ನಿರ್ಮಿಸಿದ ವಿಶ್ವ ಜನಾಂಗ ಅಥವಾ ವಿಶ್ವ ಸರಕಾರ ಮನುಷ್ಯನ ಈ ಪ್ರಾಥಮಿಕ ಸ್ವಾತಂತ್ರ್ಯ ವನ್ನೇ ಕಸಿದುಕೊಂಡಿತ್ತು. “ಪ್ರತಿಯೊಂದು ಪ್ರಾಣಿಯೂ ತನಗೆ ರುಚಿಯೆನಿ ಸಿದ ಆಹಾರವನ್ನು ಕಬಳಿಸಲು ಹಾಯ್ತೊರೆಯುತದೆ. ತನಗೆ ಹಿತವೆನಿಸಿದ ಆಹಾರವನ್ನು ತಗೆದುಕೊಳ್ಳುವ ಪ್ರಾಥಮಿಕ ಸ್ವಾತಂತ್ರ್ಯವನ್ನೇ ನೀವು ಮನುಷ್ಯನಿಂದ ಕಸುಗೊಂಡಿದ್ದೀರಿ.” ಎಂದು ನಾನು ಹೇಳಿದೆ.

“ನಾಲಗೆಗೆ ರುಚಿಯೆನಿಸಿದ ತಿನಸನ್ನು ಮುಕ್ಕುವುದು ಪ್ರಾಣಿಜೀವನದ ಪ್ರಧಾನ ಲಕ್ಷಣ. ನಾವು ಈ ಮೃಗ ಸ್ವಭಾವದಿಂದ ಮನುಷ್ಯನನ್ನು ಬಿಡುಗಡೆ ಮಾಡಿದ್ದೇವೆ.” ವಿಜ್ಞಾನಿಗಳು ನಗುತ್ತಾ ಉತ್ತರಿಸಿದರು. “ಈ ವಿಶ್ವವೇ ಅಣು ಜೀವಿಗಳಿಂದ ತುಂಬಿದೆ. ರೋಗಾಣುಗಳು ಆಹಾರ, ವಾಯುಗಳಲ್ಲಿ ಬೆರೆತುದ ರಿಂದಲೇ ಹಿಂದೆ ಮನುಷ್ಯನಿಗೆ ರೋಗ ಬರುತ್ತಿದ್ದುದು. ನಾವು ಶಾಸ್ತ್ರೀಯ ವಿಧದಿಂದ ರೋಗಾಣುಗಳ ಸಂಪರ್ಕವಾಗದಂತೆ ಆಹಾರ ತಯಾರಿಸುತ್ತಿದ್ದೇವೆ; ಮನುಷ್ಯ ಶರೀರದ ಬೆಳವಣಿಗೆಗೆ ಅಗತ್ಯವೆನಿಸಿದ ಪೋಷಕಾಂಶಗಳನ್ನು ಪ್ರಮಾಣ ಪೂರ್ವಕವಾಗಿ ಆಹಾರದಲ್ಲಿ ಬೆರೆಸುತ್ತಿದ್ದೇವೆ. ಈ ಕ್ರಮವನ್ನು ಅನುಸರಿಸಿದುದ ರಿಂದ ಜನರು ಅರೋಗ ದೃಢಗಾತ್ರರಾಗಿರುವರು. ಹತ್ತು ಶತಮಾನಗಳ ಹಿಂದೆ ಮನುಷ್ಯ ಹಸಿವೆಯನ್ನು ಅಡಗಿಸಲು ಎರಡು-ಮೂರು ರಾತ್ತಲು ಕೂಳನ್ನು ಮುಕ್ಕಬೇಕಾಗಿದ್ದಿತು. ಆದರೆ ಈಗ ಎಲ್ಲಾ ಬಗೆಯ ಆಹಾರ ಸತ್ವವನ್ನೊಳ ಗೊಂಡ ಮೂರು-ನಾಲ್ಕು ಗುಳಿಗೆಗಳನ್ನು ನುಂಗಿದರೆ ಸಾಕು; ಮನುಷ್ಯನ ಹಸಿವೆ ಯಡಗುವುದು. ಇನ್ನು ನಾಲ್ಕಾರು ತಾಸುಗಳನಕ ಅವನಿಗೆ ಆಹಾರ ಬೇಡ. ಜಠರದಲ್ಲಿ ಆಹಾರ ಜೀರ್ಣಿಸಲು ವಿಳಂಬವಿಲ್ಲ. ಉದರಕ್ಕೆ ಆಹಾರ ತಲುಪು ವುದೇ ತಡ; ಅದು ರಕ್ತದಲ್ಲಿ ಬೆರೆತು ಹೋಗುತದೆ.”

“ಹಲ್ಲುಗಳು ಹೊಟ್ಟೆ ಮೊದಲಾದ ಅಂಗಗಳ ಸ್ವಾಭಾವಿಕವಾದ ಕೆಲಸಗಳನ್ನು ತಪ್ಪಿಸಿದಂತಾಯಿತಲ್ಲ!” ನನ್ನ ಸಂದೇಹವನ್ನು ನಾನು ಹೊರಗೆಡಹಿದೆ.

“ವೈಜ್ಞಾನಿಕ ಯುಗದ ಮಾನವನ ನೆಲೆಯನ್ನು ನೀನು ಪೂರ್ತಿಯಾಗಿ ತಿಳಿದುಕೊಂಡಿಲ್ಲ.” ವಿಜ್ಞಾನಿಗಳು ಎಳೆನಗೆಯನ್ನು ಬೀರಿದರು. “ಶಿಲಾ-ಯುಗದ ಮಾನವನಿಗೂ ಇತರ ಪ್ರಾಣಿಗಳಿಗೂ ಹೆಚ್ಚಿನ ಅಂತರವಿರಲಿಲ್ಲ. ಪ್ರಾಣಿಗಳಂತೆ ಬಲಿಷ್ಠವಾದ ಹಲ್ಲುಗಳೇ ಅವನಿಗೂ ಬೇಕಾಗುತ್ತಿದ್ದುವು. ಅವನು

ತೆಗೆದುಕೊಳ್ಳುತ್ತಿದ್ದ ಆಹಾರದ ಪ್ರಮಾಣದಂತೆ ಹೊಟ್ಟೆಯಾದರೂ ದೊಡ್ಡದಿತ್ತು. ಬರಬರುತ್ತ ಅವನು ನಾಗರಿಕನಾದ. ಮೃದುವಾದ ಆಹಾರಗಳನ್ನು ಮೆಲ್ಲಲು ಕಲಿತ. ಈ ಪರಿವರ್ತನೆಯೊಡನೆ ಹಲ್ಲುಗಳ ದಾರ್ಢ್ಯ ಕಡಿಮೆಯಾಯಿತು. ಕಳೆದ ಮೂರು-ನಾಲ್ಕು ಶತಮಾನಗಳಿಂದ ಅವನು ಹಲ್ಲುಗಳನ್ನೇ ಬಳಸುತಲಿಲ್ಲ. ಪರಿಣಾಮವಾಗಿ ಈಗಿನ ಶಿಶುಗಳಿಗೆ ಹಲ್ಲುಗಳೇ ಮೂಡವು. ಹೊಟ್ಟೆಯಾದರೂ ಕಿರಿದಾಗುತ್ತ ಬಂದಿದೆ. ಆಹಾರ ಸತ್ವಗಳನ್ನೇ ಸಂಗ್ರಹಿಸಿ ಒದಗಿಸುವುದರಿಂದ ಕರುಳುಗಳಿಗೆ ಕೆಲಸವಿಲ್ಲದಾಗಿದೆ. ಮೊದಲು ಅರುವತ್ತೆರಡು ಅಡಿ ಉದ್ದವಾಗಿದ್ದ ಕರುಳು ಈಗ ಹದಿನಾಲ್ಕು-ಹದಿನಾರು ಅಡಿಗಳಿಗೆ ಇಳಿದಿದೆ. ಇನ್ನು ನಾಲ್ಕಾರು ತಲೆಮಾರುಗಳಲ್ಲಿ ಮನುಷ್ಯನಿಗೆ ಮಲವಿಸರ್ಜನಾಂಗವೇ ಇಲ್ಲವಾಗಬಹುದು. ಬಹುದು ಎಂಬ ಸಂದೇಹಕ್ಕೆ ಎಡೆಯಿಲ್ಲ. ಆ ಅಂಗ ಇಲ್ಲವಾಗುವುದು."

"ದೇಹದಲ್ಲುಂಟಾದ ಮಾರ್ಪುಗಳು ಮನಸನ್ನೂ ಬಾಧಿಸುವುದಿಲ್ಲವೇ? ಅತಿ ಯಾಂತ್ರಿಕತೆಯ ಅಚ್ಚಿನೊಳಗೆ ಸಿಲುಕಿದ ಮಾನವನ ಮನಸ್ಸು ಬುದ್ಧಿಗಳು ಕೆಳಮೊಗವಾಗವೇ?"

ನನ್ನ ಈ ಪ್ರಶ್ನೆ ವಿಜ್ಞಾನಿಗಳನ್ನು ಆಲೋಚನೆಗೆ ಈಡು ಮಾಡಿತು. ಅವರು ಹುಬ್ಬುಗಂಟಿಕ್ಕಿ ಅರೆಚಣ ಚಿಂತೆಯಲ್ಲಿ ಮಗ್ನರಾದರು. ಅನಂತರ ಅವರು ಉಸುರಿದರು. "ನಿನ್ನ ಹೇಳಿಕೆಯನ್ನು ಸಂಪೂರ್ಣವಾಗಿ ನಾನು ಅಲ್ಲಗಳೆವುದಿಲ್ಲ. ದೇಹಶಕ್ತಿ ಶಿಥಿಲತೆಯನ್ನು ಹೊಂದಿದಂತೆ, ಮನಸ್ಸು ಬುದ್ಧಿಗಳಾದರೂ ಶೈಥಿಲ್ಯವನ್ನೈದಬಹುದು. ಆದರೆ ನಮ್ಮ ಸಮಾಜ ನಿರೋಗಿಯಾದುದು. ನಮ್ಮ ಪ್ರಯೋಗಶಾಲೆಗಳಲ್ಲಿ ಮಾನಸಿಕ ಮತ್ತು ಬೌದ್ಧಿಕ ಶಕ್ತಿಗಳನ್ನು ಸಂಶೋಧಿಸುವ ವಿಭಾಗವೊಂದಿದೆ. ಅಲ್ಲಿ ನಮ್ಮ ಮನಶ್ಶಾಸ್ತ್ರಜ್ಞರು ಒಂದು ಸಾವಿರ ವರುಷಗಳಿಂದ ಇಂದಿನವರೆಗೆ ಮನುಷ್ಯನಲ್ಲಾದ ಬೌದ್ಧಿಕ ಮತ್ತು ಮಾನಸಿಕ ವಿಕಾಸವನ್ನು ಸಂಶೋಧನೆ ನಡೆಸಿದಾರೆ. ಅವರ ಸಂಶೋಧನೆಗಳ ಫಲವಾಗಿ ಹತ್ತು ಶತಮಾನಗಳ ಹಿಂದೆ ಮನುಷ್ಯನ ಬೌದ್ಧಿಕ ಬಲ ಒಂದು ನೂರೆಂದಿದ್ದರೆ, ಈಗ ಅದು ನಾನೂರೈವತ್ತಕ್ಕೆ ತಲುಪಿದೆ. ಅಂದರೆ ಭಂಡವಾಳಿ ಯುಗದಲ್ಲಿದ್ದ ಮನುಷ್ಯನಿಗಿಂತ, ವೈಜ್ಞಾನಿಕ ಯುಗದ ಮನುಷ್ಯ ನಾಲ್ಕುವರೆ ಪಾಲು ಹೆಚ್ಚು ಬುದ್ಧಿವಂತನಾಗಿದಾನೆ."

"ಸಾವಿರ ವರುಷಗಳ ಹಿಂದಿನ ಮನುಷ್ಯನಂತೆ ಇದೇನೆಂದು ನೀವೇ

ಹೇಳಿದ್ದೀರಿ. ನನ್ನ ಬುದ್ಧಿಬಲಕ್ಕೂ ನಿಮ್ಮ ವೈಜ್ಞಾನಿಕ ಯುಗದ ಜನ-ಸಾಮಾನ್ಯರ ಬುದ್ಧಿಬಲಕ್ಕೂ ಹೆಚ್ಚಿನ ಅಂತರವನ್ನು ಕಾಣಲಿಲ್ಲ."

"ನೀನಿದ್ದ ಸಮಾಜದ ಜನಸಾಮಾನ್ಯರ ಬುದ್ಧಿಬಲಕ್ಕಿಂತ ನಿನ್ನದು ನಾಲ್ಕುವರೆ ಪಟ್ಟು ಹೆಚ್ಚಾಗಿರಬಹುದು."

ನಾನು ಪ್ರತಿ ಹೇಳಲಿಲ್ಲ. ನಾನು ನಿರ್ಮಿಸಿದ ಕಾಲಯಂತ್ರವೇ ಅವರ ನುಡಿಗೆ ಪ್ರಬಲವಾದ ಸಾಕ್ಷಿಯಾಗಿತ್ತು.

ಆಹಾರ ವಿಭಾಗದ ಚಟುವಟಿಕೆಗಳನ್ನು ಅಲ್ಲಿ ನಡೆಯುತ್ತಿದ್ದ ವಿವಿಧ ಸಂಶೋಧಗಳನ್ನು ನೋಡಿದುದಾಯಿತು. ಈ ಜನರೊಡನೆ ಬಹು ದೂರ ಸಂಚರಿಸಿದರೂ, ಒಂದೇ ಒಂದು ನಾಯಿಯಾಗಲೀ, ಬೆಕ್ಕಾಗಲೀ, ಕುದುರೆ, ಹಸು ಮೊದಲಾದ ಪ್ರಾಣಿಗಳಾಗಲೀ ನನ್ನ ದೃಷ್ಟಿಯಲ್ಲಿ ಬೀಳಲಿಲ್ಲ. ವೈಜ್ಞಾನಿಕ ಯುಗದಲ್ಲಿ ಪ್ರಾಣಿವಂಶಗಳೆಲ್ಲಾ ಕೊನೆಗೊಂಡುವೇ ಎಂದು ನನಗೆ ಸೋಜಿಗವಾಯಿತು. ಆದುದರಿಂದ ವಿಜ್ಞಾನಿಗಳೊಡನೆ ನಾನು ಉಸುರಿದೆ: "ನಿಮ್ಮ ನಾಡಿನಲ್ಲಿ ನಾಲ್ಕು ಕಾಲಿನ ಪ್ರಾಣಿಗಳಾಗಲೀ, ಹಕ್ಕಿಗಳಾಗಲೀ ಕಾಣುವುದಿಲ್ಲ !"

"ಪ್ರಾಣಿಗಳು ಇಲ್ಲವಾಗಿ ನಾಲ್ಕು ಶತಮಾನಗಳಾದುವು." ವಿಜ್ಞಾನಿಗಳಂದರು. "ಪಕ್ಷಿಗಳು ಮಾತ್ರ ಕೆಲವು ಇವೆ. ಇಂದಿನ ಮನುಷ್ಯನಿಗೆ ಪ್ರಾಣಿಗಳಿಂದ ಯಾವ ಉಪಯೋಗವೂ ಇಲ್ಲ."

"ಹಾಲು, ಬೆಣ್ಣೆ, ಗಿಣ್ಣು ಮೊದಲಾದ ಆಹಾರ ಪದಾರ್ಥಗಳೂ ಚರ್ಮ ಉಣ್ಣೆ ಇತ್ಯಾದಿ ಸಾಧನಗಳೂ ಮಾನವನಿಗೆ ಅಗತ್ಯವಲ್ಲವೇ ?"

"ಹಾಲು, ಮೊಸರು, ಬೆಣ್ಣೆ ಇತ್ಯಾದಿ ಪ್ರಾಣಿಜನ್ಯ ಆಹಾರಗಳಲ್ಲಿರುವ ಪೋಷಕಾಂಶಗಳನ್ನು ಒಳಗೊಂಡ ಹಲವು ಬಗೆಯ ನೂತನ ಸಸ್ಯಾಹಾರಗಳನ್ನು ನಾವೀಗ ಬಳಸುತ್ತಿದೇವೆ. ಪ್ರಾಣಿಗಳು ಇಲ್ಲವಾದುದರಿಂದ ನಮಗೆ ಯಾವ ಬಗೆಯ ಕೊರತೆಯೂ ಉಂಟಾಗಲಿಲ್ಲ."

ಕೈಗಾರಿಕೆಯ ಕೇಂದ್ರಕ್ಕೆ ವಿಜ್ಞಾನಿಗಳು ನಮ್ಮನ್ನು ಕರೆದುಕೊಂಡು ಹೋದರು. ಇಲ್ಲಿಯಾದರೂ ಯಂತ್ರಗಳೇ ದುಡಿಯುತ್ತಿದ್ದುವು. ಅಲ್ಲಿ ಇಲ್ಲಿ ಒಬ್ಬೊಬ್ಬರಂತೆ ಕೆಲಸಗಾರರು ನಿಂತು ಯಂತ್ರಗಳ ಚಲನೆಯನ್ನು ನೋಡಿಕೊಳ್ಳುತ್ತಿದ್ದರು. ನಮ್ಮ ಕಾಲದಲ್ಲಿ ಕೂಲಿಗಾರರು ನೆರವೇರಿಸುತ್ತಿದ್ದ ಕೆಲಸಗಳನ್ನು ಯಾಂತ್ರಿಕ ಮನುಷ್ಯರು ನಿರ್ವಹಿಸುತ್ತಿದ್ದರು. ಈ ಕೇಂದ್ರದ ಜನ

ತೆಗೆ ಬೇಕಾದ ಅರಿವೆಗಳು, ಚಪ್ಪಲುಗಳು ಮೊದಲಾದ ಸಾಧನಗಳನ್ನು ತಯಾರಿಸುತಿದ್ದರು. ವಸ್ತ್ರಗಳನ್ನು ತಯಾರಿಸಲು, ಹತ್ತಿ, ಸೆಣಬು, ಗಾಜಿನ ಸರಿಗೆಗಳು—ಹುಲ್ಲು ಇವುಗಳನ್ನು ಬಳಸುತಿದ್ದರು. ಈ ಅರಿವೆಗಳು ನೀರಿನಲ್ಲಿ ಅದ್ದಿದರೆ ನೆನೆಯವು; ಬೆಂಕಿಯಲ್ಲಿ ಸುಡವು. ಸೆಕೆಗಾಲದಲ್ಲಿ ದೇಹವನ್ನು ತಂಪಾಗಿರಿಸುವವು. ಚಳಿಗಾಲದಲ್ಲಿ ದೇಹದ ಉಷ್ಣವನ್ನು ಕಾಪಾಡುವವು. ಈ ಬಗೆಯ ವಸ್ತ್ರಗಳು ಬಳಕೆಯಲ್ಲಿ ಬಂದುದರಿಂದ ಹವಮಾನಕ್ಕೆ ಅನುಗುಣವಾಗಿ ಮನುಷ್ಯ ತನ್ನ ಉಡುಪುಗಳನ್ನು ಬದಲಾಯಿಸಬೇಕಾಗಿರಲಿಲ್ಲ. ವರ್ಷದ ಎಲ್ಲಾ ಕಾಲಗಳಲ್ಲಿಯೂ ಅವನು ಒಂದೇ ಬಗೆಯ ಅರಿವೆಗಳನ್ನು ಉಪಯೋಗಿಸುತಿದ್ದ. ವಸ್ತ್ರ ವಿಭಾಗದವರು ಸಿದ್ಧವಾದ ತೊಡಿಗೆಗಳನ್ನೇ ಜನರಿಗೆ ಒದಗಿಸುತಿದ್ದರು. ಜನರ ಪ್ರಾಯಕ್ಕೆ ಅನುಗುಣವಾಗಿ ಬೇರೆ ಬೇರೆ ಅಳತೆಗಳಲ್ಲಿ ಯಾಂತ್ರಿಕ ಮನುಷ್ಯರು ವಸ್ತ್ರಗಳನ್ನು ಕತ್ತರಿಸುತಿದ್ದರು. ಯಂತ್ರಗಳು ಹೊಲಿಯುತಿದ್ದುವು. ಸಿದ್ಧವಾದ ಉಡುವುಗಳು ವಿತರಣೆಗೋಸುಗ ಪೂರಯಿಕೆಯ ಮಂದಿರಗಳಿಗೆ ಹೋಗುತಿದ್ದುವು. ಈ ದುಡಿಮೆಗಳೆಲ್ಲ ಒಬ್ಬ ಮಾನವನ ಪಾಳ್ಕಿಯಂತೆ ಅಚ್ಚುಕಟ್ಟಾಗಿ ಯಾವ ಬಗೆಯ ಕುಂದುಕೊರತೆಗಳಿಗೆ ಅವಕಾಶವಿಲ್ಲದಂತೆ ನಡೆಯುತಿದ್ದುವು. ಸುವ್ಯವಸ್ಥಿತ ರೀತಿ ಮತ್ತು ಅಚ್ಚುಕಟ್ಟುತನಗಳು ವೈಜ್ಞಾನಿಕ ಯುಗದ ವೈಶಿಷ್ಟ್ಯಗಳಾಗಿದ್ದುವು.

"ನಿಮ್ಮ ಯುಗದ ವಿರಾಟ ಸ್ವರೂಪವನ್ನು ನೋಡಿ ತಿಳಿದುಕೊಳ್ಳಲು ನನಗೆ ಅಳವಿಲ್ಲ. ಆದರೂ ನಿಮ್ಮ ಬೇಸಾಯದ ಬಗೆ, ನಿಮ್ಮ ಜನರ ಆರ್ಥಿಕ ಸ್ಥಿತಿ, ಲಲಿತಕಲೆಗಳು, ಸಾಹಿತ್ಯ ಇವುಗಳ ಅರಿವನ್ನು ತುಸ ಗಳಿಸಬೇಕೆಂದಿದೇನೆ; ನಿಮ್ಮ ರಾಜ್ಯಭಾರದ ಕ್ರಮವೂ ನನಗೆ ತಿಳಿಯದು."

"ನಮ್ಮ ವೈಜ್ಞಾನಿಕ ಸಮಾಜದ ಜೀವನದ ಎಲ್ಲಾ ಪಾರ್ಶ್ವಗಳನ್ನು ತಿಳಿಯಲು ಒಂದೆರಡು ತಾಸುಗಳು ಸಾಕಾಗುವವೇ? ಒಂದೆರಡು ದಿನಗಳ ವೇಳೆಯಾದರೂ ಬೇಕಾಗುವುದು. ಇರಲಿ. ನನಗೂ ಒಂದೆರಡು ತಾಸುಗಳನಕ ಬಿಡುವಿದೆ. ನನ್ನೊಡನೆ ಬಾ. ವ್ಯವಸಾಯ ಕ್ಷೇತ್ರಗಳಿಗೆ ಕರೆದೊಯ್ದು ನಮ್ಮ ಬೇಸಾಯದ ಕ್ರಮವನ್ನು ತೋರಿಸಿಕೊಡುವೆನು.

ನಗರದಿಂದ ನಾಲ್ಕಾರು ಮೈಲುಗಳ ಅಂತರದಲ್ಲ ವ್ಯವಸಾಯ ಕೇಂದ್ರವಿದ್ದಿತು. ದೋಣಿಯೊಂದನ್ನು ಹತ್ತಿ ನಾವು ಆ ಎಡೆಗೆ ತೆರಳಿದೆವು. ಸಂಗಡ ಮೀನಾ ಇದ್ದಳೆಂದು ನಾನು ಪ್ರತ್ಯೇಕ ಹೇಳಬೇಕಾಗಿಲ್ಲ. ಈ ಅಲೆದಾಟ

ಆಕೆಗೆ ರುಚಿಸುವುದೋ ಇಲ್ಲವೋ ಎಂದು ನನಗೆ ಸಂದೇಹವಾಯಿತು. ಆದುದರಿಂದ ನಾನು ಹೇಳಿದೆ. " ಮೀನಾ, ನಿನಗೆ ಬೇಸರವಾಗುವುದಾದರೆ ಬರುವುದು ಬೇಡ. "

" ಯಾವುದಾದರೂ ಒಂದು ರೀತಿಯಲ್ಲಿ ಹೊತ್ತು ಕಳೆಯಬೇಕಲ್ಲ. " ಅವಳು ಕಿರುದನಿಯಲ್ಲಿ ಉತ್ತರಿಸಿದಳು. " ನೀವಿಬ್ಬರು ಮಾತಾಡುವುದನ್ನು ಕೇಳಲು ಚೆನ್ನಾಗಿರುತ್ತದೆ. "

ವ್ಯವಸಾಯ ಕ್ಷೇತ್ರವನ್ನು ಸೇರಲು ನಮಗೆ ಹೆಚ್ಚು ಸಮಯ ಬೇಕಾಗಿ ಬರಲಿಲ್ಲ. ಹತ್ತಾರು ನಿಮಿಷಗಳಲ್ಲಿಯೇ ನಾವು ಆ ಎಡೆಯನ್ನು ಸೇರಿದೆವು. ವಿದ್ಯುತ್ತು ಸಂಗ್ರಹಿಸಿಟ್ಟ ಒಂದು ದೊಡ್ಡ ಆಲಯವಿತ್ತು. ಎತ್ತ ಕಡೆಗೆ ನೋಟವನ್ನು ಹೊರಳಿಸಿದರೂ, ಕಣ್ಣು ತಲುಪುವವರೆಗೆ ವಿಶಾಲವಾದ ಬಯಲು. ಸಾಲು ಸಾಲಾಗಿ ವಿದ್ಯುತ್ತಿನ ಕಂಬಗಳು. ಇಪ್ಪತ್ತು ಅಡಿಗಳ ಅಂತರದಲ್ಲಿ ತಂತಿಗಳು ಹಾದು ಹೋಗುತಿದ್ದುವು. ಒಂದೆರಡಲ್ಲ; ನೂರಾರು ಉಳುವ ಯಂತ್ರಗಳು ಬಯಲಲ್ಲಿ ಉಳುಮೆಯನ್ನೆಸಗುತಿದ್ದುವು. ಇನಿತೊಂದು ಯಂತ್ರಗಳನ್ನು ಬಳಸುವುದನ್ನು ಕಂಡು ನನಗೆ ಸೋಜಿಗವೆನಿಸಿತು. " ಏನು ಬಹಳ ಯಂತ್ರಗಳನ್ನು ಉಪಯೋಗಿಸುತಿದಾರಲ್ಲ. " ಎಂಬ ಉದ್ಗಾರ ನನ್ನ ಕೊರಳಿಂದ ಹೊರಟಿತು.

" ಈ ಕ್ಷೇತ್ರ ಪುಟ್ಟದೆಂದು ತಿಳಿದೆಯಾ? ಇದು ನಲವತ್ತು ಮೈಲು ಉದ್ದ ಮೂವತ್ತು ಮೈಲು ಅಗಲವಾಗಿದೆ. ಇದನ್ನು ಉಳಲು ಇನ್ನೂರು ಟ್ರಾಕ್ಟರುಗಳು ಬೇಕು. " ವಿಜ್ಞಾನಿಗಳು ಉಲಿದರು. " ಹಾಗಾದರೆ ಒಂದು ವಾರದಲ್ಲಿ ಇಡೀ ಬಯಲನ್ನು ಉತ್ತು ಮುಗಿಸಬಹುದು.

ಗುಂ' ಬಾನಿನಲ್ಲಿ ಸದ್ದಾಯಿತು. ನಾನು ಮೊಗವೆತ್ತಿ ನಿಟ್ಟಿಸಿದೆ. ಆಕಾಶದಲ್ಲಿ ಹತ್ತೆಂಟು ವಿಮಾನಗಳು ಬಹು ತಗ್ಗಾಗಿ ತೇಲಾಡುತಿದ್ದುವು. ಈ ವಿಮಾನಗಳಿಂದ ಏನನ್ನೋ ಬಯಲಮೇಲೆಲ್ಲಾ ಉದುರಿಸುತಿದ್ದರು. ಅವರೇನು ಮಾಡುತಿಹರೆಂದು ನನಗೆ ತಿಳಿಯಲಿಲ್ಲ. ನಾನು ಬೆಪ್ಪನಂತೆ ವಿಜ್ಞಾನಿಗಳ ಮೊಗ ನೋಡಿದೆ. " ಆ ವಿಮಾನಗಳು ಏನು ಮಾಡುತಿರುವುವು? "

" ಬಯಲಿಗೆ ಗೊಬ್ಬರ ಹಾಕುತಿರುವುವು. "

" ಗೊಬ್ಬರವನ್ನೇ! " ಅಚ್ಚರಿಯಿಂದ ನಾನು ಕಣ್ಣುಗಳನ್ನಗಲಿಸಿದೆ.

" ಅಹುದು. ಇಡೀ ಬಯಲಿನಲ್ಲಿ ಗೊಬ್ಬರ ಹರಡಲು ವಿಮಾನಗಳಿಗಿಂತ ಸುಲಭವಾದ ಉಪಕರಣಗಳು ಬೇರೆಯಿಲ್ಲ. ಟ್ರ್ಯಾಕ್ಟರುಗಳು ಬಯಲನ್ನು ಉತ್ತಿರುವಾಗ ಮೇಲಿನಿಂದ ವಿಮಾನಗಳು ಗೊಬ್ಬರವನ್ನು ಎರಚುತವೆ. ಇನ್ನೊಮ್ಮೆ ಟ್ರ್ಯಾಕ್ಟರು ಆ ಎಡೆಯಲ್ಲಿ ಚಲಿಸುವಾಗ ಗೊಬ್ಬರ ಮಣ್ಣಿನೊಡನೆ ಬೆರೆತು ಹೋಗುತ್ತದೆ. ಬೀಜಗಳನ್ನು ಬಿತ್ತುವುದಾದರೂ ವಿಮಾನಗಳ ಮೂಲಕವೇ ಆಗಿದೆ. ಬಿತ್ತುವ ಮುನ್ನ ಬೀಜಗಳ ಮೇಲೆ ವಿದ್ಯುತ್ತನ್ನು ಪ್ರಯೋಗಿಸುತ್ತೇವೆ. ಅವುಗಳನ್ನು ಮೊಳಕೆ ಬರಿಸುತ್ತೇವೆ. ವಿಮಾನಗಳಿಗೆ ಬಿತ್ತನೆಯ ಯಂತ್ರಗಳನ್ನು ಜೋಡಿಸಿರುವೆವು. ಅವು ಆಕಾಶದಲ್ಲಿ ಹಾರಿ ಬರುವುವು. ಬೀಜಗಳನ್ನು ಒಂದೇ ಸಮನಾಗಿ ಹೊಲದಲ್ಲಿ ಹರಡುವುವು. ಕೈಗಳಿಂದ ಬಿತ್ತುವಂತೆ ಒಂದೆಡೆಯಲ್ಲಿ ಪಟ್ಟನಾಗಿ ಮಗದೊಂದು ಎಡೆಯಲ್ಲಿ ತೆಳ್ಳನಾಗಿ ಬೀಳುವುದಿಲ್ಲ. "

ವಿಜ್ಞಾನಿಗಳು ಮಾತು ಮುಗಿಸುವ ಮುನ್ನ ಆಕಾಶದಲ್ಲಿ ವಿಮಾನಗಳ ಎರಡನೆಯ ಸಾಲು ಕಣ್ಣಿಗೆಸೆದಿತು. " ನೋಡು ಅವೇ ಬಿತ್ತನೆಯ ವಿಮಾನಗಳು ! " ಎಂದು ಅವರು ನುಡಿದರು. ವಿಮಾನಗಳು ತಗ್ಗಿನಲ್ಲಿ ನಿದಾನವಾಗಿ ಸಂಚರಿಸಿದುವು. ವಿಮಾನಗಳ ಹಿಂಬದಿಯಿಂದ ಮಳೆ ಹನಿಗಳು ಉದುರುವಂತೆ ಕಾಳುಗಳು ಒಂದೇ ಸಮನಾಗಿ ಬೀಳತೊಡಗಿದುವು. ಅಷ್ಟು ವಿಶಾಲವಾದ ಬಯಲಿನಲ್ಲಿ ಧಾನ್ಯಗಳನ್ನು ಬಿತ್ತಲು ವಿಮಾನಗಳಿಗೆ ಅರ್ಧ ತಾಸಿಗಿಂತ ಹೆಚ್ಚು ಸಮಯ ತೆಗೆದುಕೊಳ್ಳಲಿಲ್ಲ.

" ಪೈರು ಕೊಯ್ಯುವುದಾದರೂ ಯಂತ್ರಗಳಿಂದಲೇ ಅಲ್ಲವೇ ? "

" ಅಹುದು. ಉಳುವ ಟ್ರ್ಯಾಕ್ಟರುಗಳೇ ಆ ಕೆಲಸವನ್ನೂ ಎಸಗುವವು. ಪೈರನ್ನು ಕತ್ತರಿಸಲು ಅಗಲವಾದ ಅಲಗುಗಳನ್ನು ಈ ಯಂತ್ರಕ್ಕೆ ಜೋಡಿಸಿರುವೆವು. ಅಲಗುಗಳು ಪೈರನ್ನು ಕತ್ತರಿಸುವುವು. ಬಯಲಿನ ಮಧ್ಯದಲ್ಲಿ ಹತ್ತುಮೈಲಿಗೊಂದರಂತೆ ಧಾನ್ಯಗಳನ್ನು ವಿಂಗಡಿಸುವ ಯಂತ್ರಗಳಿವೆ. ಅವು ಕಾಳುಗಳನ್ನು ಹುಲ್ಲಿನಿಂದ ಬೇರೆ ಮಾಡುವುವು. ಕಾಳುಗಳನ್ನು ವಿಮಾನ ಮತ್ತು ದೋಣಿಗಳ ಮೂಲಕ ಆಹಾರ ವಿಭಾಗಕ್ಕೆ ಒಯ್ಯುವೆವು. ಹುಲ್ಲು ವಸ್ತ್ರವಿಭಾಗವನ್ನು ಸೇರುವುದು. "

" ವಸ್ತ್ರವಿಭಾಗಕ್ಕೆ ಏಕೆ ಒಯ್ಯುವಿರಿ ? ಹುಲ್ಲಿನಿಂದ ಏನು ಪ್ರಯೋಜನ ? "

" ಅಲ್ಲಿ ಹುಲ್ಲನ್ನು ಯಂತ್ರಗಳ ಮೂಲಕ ಕತ್ತರಿಸುವೆವು; ಒಂದುವಾರ ನೀರಲ್ಲಿ ನೆನೆ ಹಾಕಿ ರಸಾಯನಿಕ ದ್ರವ್ಯಗಳಿಂದ ತೊಳೆದು ಶುಭ್ರ ಮಾಡುವೆವು. ಅನಂತರ ಯಾಂತ್ರಿಕ ಅರೆವಗಲ್ಲುಗಳಿಗೆ ಕೊಟ್ಟು, ಅವನ್ನು ಅರೆದು ನುಣ್ಣಗೆ ಮಾಡುವೆವು. ಕೊನೆಗೆ ದೊಡ್ಡ ದೊಡ್ಡ ಅಚ್ಚುಗಳಿಗೆ ಹಾಕಿ ವಸ್ತ್ರಗಳಾಗಿ ಮಾರ್ಪಡಿಸುವೆವು. ಈ ವಸ್ತ್ರಗಳನ್ನೇ ಶಿಶುರಕ್ಷಣಾಲಯದಲ್ಲಿಯೂ ವೈದ್ಯ ಶಾಲೆಗಳಲ್ಲಿಯೂ ಬಳಸುತ್ತಾರೆ. "

" ಬಿತ್ತುವುದು, ಕೊಯ್ಯುವುದು ಈ ಎರಡು ಕೆಲಸಗಳ ನಡುವೆ ಪೈರಿಗೆ ಬೇರಾವ ಬಗೆಯ ಆರೈಕೆಯೂ ಇಲ್ಲವೇ? "

" ತಕ್ಕ ಆರೈಕೆಯನ್ನು ಒದಗಿಸುತ್ತೇವೆ. ಸಸ್ಯಗಳನ್ನು ನಾಶಪಡಿಸುವ ಅಣುಜೀವಿಗಳನ್ನು ನಾವು ಕೊನೆಗಾಣಿಸಿದ್ದೇವೆ. ಅವು ಮರಳಿ ತಲೆದೋರ ಬಹುದೆಂಬ ಭಯ ಇದ್ದೇ ಇದೆ. ಆದುದರಿಂದ ಎರಡು ಸಲ ವಿಮಾನಗಳಿಂದ ಅಣುಜೀವಿಗಳನ್ನೂ ಹುಳಹುಪ್ಪಟೆಗಳನ್ನೂ ಕೊಲ್ಲಲಿಹ ರಸಾಯನಿಕ ಜಲಗಳನ್ನು ಚಿಮುಕಿಸುತ್ತೇವೆ. ಸಸ್ಯಗಳಿಗೆ ಹೆಚ್ಚು ಪುಷ್ಟಿಯನ್ನುಂಟು ಮಾಡಲು ಪ್ರಬಲರೂಪವಾದ ರಸಾಯನಿಕ ಗೊಬ್ಬರಗಳನ್ನು ಮೂರು ಸಲ ವಿಮಾನಗಳು ಮಳೆಗರೆವುವು. "

" ಬಿತ್ತಿದ ಎಷ್ಟು ತಿಂಗಳ ಅನಂತರ ಪೈರು ಕೊಯ್ಲಿಗೆ ಬರುವುದು? "

" ಎರಡು ಶತಮಾನಗಳ ಹಿಂದೆ ಐದು ತಿಂಗಳು ಬೇಕಾಗುತ್ತಿದ್ದಿತು. ಆದರೆ ಈಗ ವಿದ್ಯುತ್ ಮತ್ತು ಇತರ ಕೃತ್ರಿಮ ರೀತಿಗಳಿಂದ ಸಸ್ಯಗಳು ಬೇಗ ಬೆಳೆವಂತೆ ಮಾಡಿದ್ದೇವೆ. ಮೂರು ತಿಂಗಳಲ್ಲಿಯೇ ಪೈರು ಕೊಯ್ಲಿಗೆ ಬರುತ್ತದೆ. ಬಿತ್ತಿದ ದವಸಕ್ಕೂ, ಕೊಯ್ದ ಪೈರಿಗೂ ಒಂದಕ್ಕೆ ನಾನೂರರಂತೆ ಅಂತರವಿದೆ. ಈಗ ಪ್ರಪಂಚದಲ್ಲಿ ಒಂದು ಸಾವಿರ ಕೋಟಿ ಜನರಿದ್ದಾರೆ. ಈ ಗೋಳದಲ್ಲಿ ಬೆಳವ ಆಹಾರ ಜನರಿಗೆಲ್ಲ ಸಾಕಾಗಿ, ಇನ್ನೂರು ಕೋಟಿಗೆ ಬೇಕಾಗುವಷ್ಟು ಪ್ರತಿ ವರುಷ ಮಿಗುತಲಿದೆ. ನಮ್ಮ ಸಮಾಜದಲ್ಲಿ ಆಹಾರಾಭಾವದ ಸಮಸ್ಯೆ ಯಿಲ್ಲ. "

೮

ವಿಜ್ಞಾನಿಗಳು ನಮ್ಮನ್ನು ತಮ್ಮ ವಸತಿಗೆ ಕರೆದೊಯ್ದರು. ಅವರ ನಿವಾಸ ಹತ್ತಾರು ಕೋಣೆಗಳಿಂದ ಕೂಡಿದ ಒಂದು ಕಟ್ಟಡ. ಅವರ ಮನೆ ಯಲ್ಲಿಯೇ ಅವರ ಪ್ರಯೋಗ ಶಾಲೆಯಿದ್ದಿತು. ಮನುಷ್ಯನ ಮಾನಸಿಕ ಮತ್ತು

ಬೌದ್ಧಿಕ ವಿಕಾಸಕ್ರಮಗಳ ಸಂಶೋಧನೆ ಅವರ ಕಾರ್ಯಕ್ಷೇತ್ರವಾಗಿದ್ದಿತು. ಮನುಷ್ಯನ ಬುದ್ಧಿ ಮತ್ತು ಮನಸ್ಸುಗಳು ಸಮಾಜದ ಆಶೆ ಆಕಾಂಕ್ಷೆಗಳಿಗೆ ವಿರುದ್ಧವಾಗಿ ಕೊಂಕು ದಾರಿಯನ್ನು ಹಿಡಿಯದಂತೆ ನೋಡಿಕೊಳ್ಳುವುದು ಅವರ ಅತಿ ಮುಖ್ಯ ಹೊಣೆಯಾಗಿದ್ದಿತು. ಪ್ರಗತಿಯನ್ನು ಅವಲಂಬಿಸಿದ ಬುದ್ಧಿಯನ್ನು ತಿದ್ದುವುದು, ಸಮಾಜದ ಅಂಕೆಗೆ ಒಳಪಡಿಸುವುದು ಇವೆಲ್ಲ ಅವರ ಕ್ಷೇತ್ರದ ಪರಿಧಿಗೆ ಸೇರಿದ ಕಾರ್ಯಗಳಾಗಿದ್ದುವು. ಅವರ ಪ್ರಯೋಗ ಶಾಲೆಯಲ್ಲಿ ಸಾವಿರಾರು ಮಂದಿ ಮಾನಸಿಕ ರೋಗಿಗಳ ಚರಿತ್ರೆ, ಅವರ ರೋಗ ಚಿಕಿತ್ಸೆಯ ಕ್ರಮ ಮತ್ತು ಫಲಿತಾಂಶಗಳನ್ನು ವಿವರಿಸತಕ್ಕ ಹೊತ್ತಿಗೆ ಗಳಿದ್ದುವು. ಬೇರೊಂದು ಬೀರುವಿನಲ್ಲಿ ಮನುಷ್ಯನ ಬುದ್ಧಿ ವಿಕಾಸದ ಚರಿತ್ರೆಗೆ ಸಂಬಂಧಿಸಿದ ಗ್ರಂಥಗಳಿದ್ದುವು. ಇನ್ನೊಂದೆಡೆಯಲ್ಲಿ ಮನುಷ್ಯನ ಬೌದ್ಧಿಕ ಶಕ್ತಿಯನ್ನು ಪರೀಕ್ಷಿಸುವ, ವ್ಯಕ್ತಿಯ ಮಾನಸಿಕ ಪ್ರಪಂಚವನ್ನು ಚಿತ್ರಿಸುವ ನೂರಾರು ಬಗೆಯ ಯಂತ್ರಗಳಿದ್ದುವು. ಹತ್ತಾರು ಮಂದಿ ಉಪವಿಜ್ಞಾನಿಗಳು ಈ ಯಂತ್ರಗಳ ಮುಂದೆ ನಿಂತು, ನಕಾಶಗಳನ್ನು ಪರಿಶೋಧಿಸುತ್ತಾ, ಅಂಕೆಗಳ ಪಟ್ಟಿಗಳನ್ನು ಪರಸ್ಪರ ತುಲನೆ ಮಾಡುತ್ತಾ, ತಮ್ಮ ಕೆಲಸಗಳನ್ನು ಮುಂದು ವರಿಸುತಿದ್ದರು.

ವಿಜ್ಞಾನಿಗಳು ಪ್ರಯೋಗಶಾಲೆಯಲ್ಲಿ ಪ್ರವೇಶಿಸಿದೊಡನೆಯೇ ಒಬ್ಬ ಉಪವಿಜ್ಞಾನಿ ಒಂದು ಕಿರುಹೊತ್ತಿಗೆಯನ್ನು ತಂದು ಅವರ ಕೈಗೆ ನೀಡಿದ. ಆ ಪುಸ್ತಕ ಒಬ್ಬ ರೋಗಿಯ ಜೀವನ ಚರಿತ್ರೆಯಾಗಿದ್ದಿತು. “ನಾನು ಹೇಳಿದ ಚಿಕಿತ್ಸೆಯ ಪರಿಣಾಮವೇನಾಯಿತು ?” ಎಂದು ವಿಜ್ಞಾನಿಗಳು ಅವನ ಮೊಗ ನೋಡಿದರು.

“ಅದನ್ನು ಪುಸ್ತಕದ ಕೊನೆಯಲ್ಲಿ ಬರೆದಿದೇನೆ.” ಉಪವಿಜ್ಞಾನಿ ಉತ್ತರಿಸಿದ. “ನಿಮ್ಮ ಸೂಚನೆಯಂತೆ ನಲವತ್ತು ಬಗೆಯ ಚಿಕಿತ್ಸೆಗಳನ್ನು ನಡೆಸಿದೆವು. ಆದರೆ ರೋಗ ನಿವಾರಣೆಯಾಗಲಿಲ್ಲ.”

“ಇನ್ನು ಬೇರೆ ಚಿಕಿತ್ಸೆಯಿಲ್ಲ. ವಿದ್ಯುತ್ತಿಗೆ ಜೀವವನ್ನು ಒಪ್ಪಿಸುವುದೇ ಕೊನೆಯ ಮದ್ದು.” ಎಂದು ವಿಜ್ಞಾನಿಗಳು ತಲೆಯನ್ನು ಅಲುಗಿಸಿದರು; ತಮ್ಮ ಮೇಜದ ಬಳಿಗೆ ಹೋಗಿ ಲೇಖನಿಯನ್ನು ತೆಗೆದುಕೊಂಡರು; ಪುಸ್ತಕದ ಕೊನೆಯಲ್ಲಿ ತಮ್ಮ ಅಭಿಪ್ರಾಯವನ್ನು ಸರಸರನೆ ಬರೆದರು. “ಈ ಹೊತ್ತಿಗೆ

ಯನ್ನು ಕೇಂದ್ರದ ಮುಖ್ಯಾಧಿಕಾರಿಗೆ ತಲುಪಿಸು" ಎಂದು ಅವರು ಹೊತ್ತಿಗೆಯನ್ನು ಉಪವಿಜ್ಞಾನಿಯ ಕಡೆಗೆ ಚಾಚಿದರು.

"ಆಗಲಿ." ಎಂದು ಆತ ತಲೆಯನ್ನು ತಗ್ಗಿಸಿ ಅಲ್ಲಿಂದ ತೆರಳಿದ.

"ನಿಮ್ಮ ಸಮಾಜದಲ್ಲಿ ರೋಗಿಗಳೇ ಇಲ್ಲವೆಂದು ಭಾವಿಸಿದ್ದೆ" ಎಂದೆ ನಾನು.

"ಇದು ಶಾರೀರಿಕ ರೋಗವಲ್ಲ; ಮಾನಸಿಕ ರೋಗ."

"ರೋಗಕ್ಕೇನು ನಿದಾನ?"

"ಕಳೆದ ಆರು ತಿಂಗಳಿಂದ ಚಿಕಿತ್ಸೆ ನಡೆಸುತಿದ್ದೇವೆ. ಆದರೆ ಏನೂ ಪ್ರಯೋಜನವಾಗಲಿಲ್ಲ."

"ರೋಗ ಲಕ್ಷಣಗಳು ಯಾವವು?"

"ಆರು ತಿಂಗಳ ಹಿಂದೆ ಬಯಲಲ್ಲಿ ಬೆಳೆದು ನಿಂತಿದ್ದ ಪೈರಿಗೆ ಕಿಚ್ಚನ್ನಿಕ್ಕಿದ. ಬೇರೆ ಕಾಲಗಳಲ್ಲಿ ಆಗಿದ್ದರೆ ಆತನ ಗೈಮೆಗೆ ರಾಜದ್ರೋಹ, ಸಮಾಜದ್ರೋಹ ಎಂಬ ಹೆಸರುಗಳನ್ನಿತ್ತು ಶೂಲಕ್ಕೇರಿಸುತಿದ್ದರು; ಇಲ್ಲವೇ ಸೆರೆಮನೆಗೆ ಕಳುಹುತಿದ್ದರು. ಆದರೆ ನಾವು ಅದನ್ನು ಮಾನಸಿಕ ರೋಗವೆಂದು ಪರಿಗಣಿಸಿ ಈತನಕ ಚಿಕಿತ್ಸೆ ನಡೆಸಿದೆವು. ಆದರೆ ರೋಗ ಪರಿಹಾರವಾಗಲಿಲ್ಲ."

"ರೋಗ ಪರಿಹಾರವಾಗಲಿಲ್ಲವೆಂದು ವಿದ್ಯುತ್ತಿಗೆ ಗುರಿಪಡಿಸಿಕೊಳ್ಳುವುದೇ?"

"ಮತ್ತೇನು ಮಾಡಬೇಕು? ಆರು ತಿಂಗಳಿಂದ ಚಿಕಿತ್ಸೆ ನಡೆಸುತಿದ್ದೇವೆ. ಆತನ ಚಿಕಿತ್ಸೆಗೆ ವೈಜ್ಞಾನಿಕ ಸಂಶೋಧನೆ ಮತ್ತು ಬುದ್ಧಿಗಳು ಮೀಸಲಾಗಿದ್ದುವು. ಆದರೂ ರೋಗವಾಸಿಯಾಗಲಿಲ್ಲ. ಆಜನ್ಮ ರೋಗಿಯಾಗಿರುವವನಿಗೆ ನಮ್ಮ ಸಮಾಜದಲ್ಲಿ ಜೀವಿಸಲು ಹಕ್ಕಿಲ್ಲ."

"ವೈಜ್ಞಾನಿಕ ಯುಗದಲ್ಲಿ ಬೌದ್ಧಿಕ ಸ್ವಾತಂತ್ರ್ಯವೇ ಇಲ್ಲವೆಂದ ಹಾಗಾಯಿತು."

"ಸ್ವಾತಂತ್ರ್ಯವೆಂಬ ಪದವನ್ನು ಮನುಷ್ಯ ದುರುಪಯೋಗಪಡಿಸಿದಷ್ಟು ಬೇರಿನ್ನಾವ ಪದವನ್ನೂ ದುರುಪಯೋಗಪಡಿಸಿರಲಾರ. ವ್ಯವಸಾಯ ಕ್ಷೇತ್ರಗಳಿಗೆ ಕಿಚ್ಚನ್ನಿಕ್ಕಬೇಕೆಂಬ ಮತ್ತು ನೀರೆತ್ತುವ ಯಂತ್ರಗಳನ್ನು ನಾಶಪಡಿಸಬೇಕೆಂಬ ಭಾವನೆಗಳು ಜನರಲ್ಲಿ ಬೆಳೆಯಲು ನಾವು ಅವಕಾಶಕೊಟ್ಟರೆ ನಾಳೆ ವಿಶ್ವ ಜನಾಂಗದ ಗತಿ ಏನಾಗಬೇಕು? ಬುದ್ಧಿಪೂಪನ ಮತ್ತು ಇತರ ಉಪಕರಣ

ಗಳಿಂದ ಮನುಷ್ಯನ ಮಾನಸಿಕ ಚೇತನದ ಪ್ರಮಾಣಗಳನ್ನು ನಾವು ಅರಿತಿದ್ದೇವೆ. ಮೇಲ್ಮಟ್ಟದ ಬೌದ್ಧಿಕ ಚೇತನವಿರುವವರು ವಿಜ್ಞಾನಿಗಳಾಗಿ, ಆಡಳಿತಗಾರರಾಗಿ ಮತ್ತು ನುರಿತ ಕೆಲಸಗಾರರಾಗಿ ವಿಶ್ವಜನಾಂಗಕ್ಕೆ ಸೇವೆಯನ್ನು ಸಲ್ಲಿಸುತ್ತಿದ್ದಾರೆ; ಸಾಧಾರಣವಾದ ಬುದ್ಧಿಬಲವಿರುವವರು ಜನಸಾಮಾನ್ಯರಾಗಿ ಬಾಳುತ್ತಿದ್ದಾರೆ. ಸಮಾಜಕ್ಕೆ ವಿರೋಧವಾಗಿ ಕಿಡಿಗೇಡಿತನವನ್ನೆಬ್ಬಿಸುವವರು ಕೀಳುತರದ ಬುದ್ಧಿಯುಳ್ಳವರೇ ಸರಿ. ನಮ್ಮ ಜನರಲ್ಲಿ ನೂರಕ್ಕೆ ಅರುವತ್ತೈದು ಮಂದಿ ಸಾಧಾರಣ ಮಟ್ಟಕ್ಕಿಂತಲೂ ಮಿಗಿಲಾದ ಬುದ್ಧಿಶಕ್ತಿಯುಳ್ಳವರು. ಅವರಿಗೆ ಸಮಾಜದ ವಿವಿಧ ಶಾಖೆಗಳಲ್ಲಿ ಎಡೆಗಳನ್ನು ನೀಡಿ ಮತ್ತು ಮನಸ್ಸುಗಳ ಪೂರ್ಣ ವಿಕಾಸಕ್ಕೆ ಅವಕಾಶವನ್ನು ಒದಗಿಸಿದ್ದೇವೆ. ''

'' ನಿಮ್ಮ ಸಮಾಜದಲ್ಲಿ ಸೆರೆಮನೆಗಳಿಲ್ಲವೇ ? '' ವಿಜ್ಞಾನಿಗಳ ಮಾತುಗಳ ಹೊನಲನ್ನು ನಾನು ತಡೆದು ನಿಲ್ಲಿಸಿದೆ.

'' ಸೆರೆಮನೆಗಳೇ ! ಭಂಡವಾಳಿ ಯುಗದ ವೈಶಿಷ್ಟ್ಯವೆಂದರೆ, ಅವರು ನಿರ್ಮಿಸಿದ ಸೆರೆಮನೆಗಳು. ಸಮಾಜವಲ್ಲಿ ಅಸಮತ್ವ ನೆಲಸಿದ್ದು ಒಂದು ಪಕ್ಷದವರು ಇನ್ನೊಂದು ಪಕ್ಷದವರ ಮೇಲೆ ಕಾಳಗವೆಸಗುತ್ತಿದ್ದಾಗ, ಅಧಿಕಾರಾರೂಢ ಪಕ್ಷ ತನ್ನ ಶತ್ರುಗಳನ್ನು ಸದೆಬಡಿಯಲು ಸೆರೆಮನೆಗಳನ್ನೂ, ಸೈನ್ಯಗಳನ್ನೂ ತಯಾರಿಸಿತು. ಈಗ ಅಸಮತ್ವ ಅಳಿದಿದೆ. ಉಳ್ಳವರು, ಇಲ್ಲದವರು ಎಂಬ ವರ್ಗವ್ಯತ್ಯಾಸಗಳು ಕೊನೆಗೊಂಡಿವೆ. ಆದುದರಿಂದ ಸೆರೆಮನೆಗಳ ಅಗತ್ಯವೇ ಸಮಾಜಕ್ಕಿಲ್ಲ. ಈ ಸಮಾಜದ ಕಟ್ಟಳೆಗಳನ್ನು ಮೀರುವವರು ವೈದ್ಯಕೀಯ ಚಿಕಿತ್ಸೆಗಳಿಗೆ ಗುರಿಯಾಗುತ್ತಾರೆ. ''

'' ಕೊನೆಗೆ ವಿದ್ಯುತ್ತಿನ ಪ್ರಹಾರಕ್ಕೂ ಎರವಾಗುವರು ! ''

'' ನೀನು ಹಾಸ್ಯ ಮಾಡು. '' ವಿಜ್ಞಾನಿಗಳಂದರು. '' ಆದರೆ ನಮ್ಮ ಸಮಾಜ ಬದುಕುತ್ತಲಿದೆ; ಬಾಳುತ್ತಲಿದೆ; ವಿಕಾಸ ಹೊಂದುತ್ತಲಿದೆ. ಈ ಸಂಗತಿಯನ್ನು ನೆನಪಿನಲ್ಲಿಡು. ''

'' ನಿಮ್ಮ ಜನಜೀವನವನ್ನು ನೋಡಿದರೆ, ನಿಮ್ಮ ವಿಶ್ವಜನಾಂಗ ಒಂದು ಸರ್ವಾಧಿಕಾರದ ಆಡಳಿತವೆಂದು ತೋರುತ್ತದೆ. ''

'' ಬೇಕಾದರೆ ಸರ್ವಾಧಿಕಾರವೆಂದು ಹೇಳು. ಆದರೆ ನಮ್ಮ ವಿಶ್ವಜನಾಂಗ ಏಕತಂತ್ರ ಶಾಸನವಲ್ಲ. '' ವಿಜ್ಞಾನಿಗಳು ತಲೆಯನ್ನು ಅಲುಗಿಸಿದರು. ''ಜನರು ಆರಿಸಿದ ಪ್ರತಿನಿಧಿಗಳೇ ಶಾಸನವನ್ನು ಎಸಗುತ್ತಲಿದ್ದಾರೆ.

ನಮ್ಮಲ್ಲಿ ಸೂರಕ್ಕೆ ಅರುವತ್ತು ಮಂದಿ ಮತದಾನದ ಹಕ್ಕುಳ್ಳವರು. ವಿಜ್ಞಾನಿಗಳು, ಆಡಳಿತಗಾರರು ಮತ್ತು ನುರಿತ ಕೆಲಸಗಾರರು ಇವರಿಗೆ ಮತದಾನದ ಅಧಿಕಾರವಿದೆ. ಯಾವ ಶಾಖೆಯಲ್ಲಿಯೂ ತಜ್ಞರಲ್ಲದ ಸಾಮಾನ್ಯ ಜನರಿಗೆ ಮತದಾನದ ಹಕ್ಕಿಲ್ಲ. ಪ್ರತಿಯೊಂದು ನಗರವೂ ಒಂದೊಂದು ಶಾಸನ ಕೇಂದ್ರವಾಗಿದೆ. ಆ ಕೇಂದ್ರದ ಆಡಳಿತವನ್ನು ಆಯಾ ಕೇಂದ್ರ ಸಮಿತಿಯವರು ನೋಡಿಕೊಳ್ಳುತಾರೆ. ಈ ಸಮಿತಿಯಲ್ಲಿ ಹನ್ನೊಂದು ಮಂದಿ ಸದಸ್ಯರಿದ್ದು, ಅವರಲ್ಲಿ ಆರು ಮಂದಿ ವಿಜ್ಞಾನಿಗಳೂ ಮೂರು ಮಂದಿ ಆಡಳಿತಗಾರರೂ, ಇಬ್ಬರು ಕೆಲಸಗಾರರೂ ಆಗಿರುವರು. ಆ ಆರು ಮಂದಿ ವಿಜ್ಞಾನಿಗಳಲ್ಲಿ ನಾನೂ ಒಬ್ಬನಾಗಿದ್ದೇನೆ. ಈ ಪ್ರಾಂತದಲ್ಲಿ ಅಂದರೆ ದಕ್ಷಿಣ ದೇಶದಲ್ಲಿ ಇಂತಹ ಎರಡು ಸಾವಿರ ಕೇಂದ್ರಗಳಿವೆ. ಐವತ್ತು ಕೇಂದ್ರಗಳಿಗೆ ಒಬ್ಬ ಪ್ರತಿನಿಧಿಯಂತೆ ಪ್ರಾಂತಿಕ ಸಮಿತಿಗೆ ಸದಸ್ಯರನ್ನು ಆರಿಸಲಾಗುವುದು. ಈ ಪ್ರಾಂತಿಕ ಸಮಿತಿಯಲ್ಲಿ ಇಪ್ಪತ್ತನಾಲ್ಕು ಮಂದಿ ವಿಜ್ಞಾನಿಗಳು ಹತ್ತು ಮಂದಿ ಆಡಳಿತಗಾರರು ಮತ್ತು ಆರು ಮಂದಿ ಕೆಲಸಗಾರರು ಇರುವರು. ಇಡೀ ಪ್ರಪಂಚವನ್ನು ನಾವು ಏಳುನೂರು ಪ್ರಾಂತಗಳಾಗಿ ವಿಭಾಗಿಸಿರುವೆವು. ವಿಶ್ವ ಸಮಿತಿಗೆ ಪ್ರಾಂತಗಳು ಪ್ರತಿನಿಧಿಗಳನ್ನು ಕಳುಹುವುವು. ವಿಶ್ವ ಸಮಿತಿಯಲ್ಲಿ ನೂರಿಪ್ಪತ್ತು ಮಂದಿ ಸದಸ್ಯರಿರುವರು. ಅವರಲ್ಲಿ ಎಪ್ಪತ್ತು ಮಂದಿ ವಿಜ್ಞಾನಿಗಳು, ಮೂವತ್ತು ಮಂದಿ ಆಡಳಿತಗಾರರು ಮತ್ತು ಇಪ್ಪತ್ತು ಮಂದಿ ತಜ್ಞ ಕೆಲಸಗಾರರು ಇರುವರು. ಸಮಗ್ರ ಮಾನವಸಮಾಜಕ್ಕೆ ಸಂಬಂಧಿಸಿದ ಎಲ್ಲ ಹೊಣೆಗಳೂ ಈ ವಿಶ್ವ ಸಮಿತಿಯ ಹೆಗಲ ಮೇಲಿವೆ. ಈ ವಿಶ್ವ ಸಮಿತಿಯೇ ಸಮಾಜರಚನೆಯ ರೂಪರೇಷೆಗಳನ್ನು ಚಿತ್ರಿಸುತದ, ಮುಂದಿನ ಪೀಳಿಗೆಯ ಮಾನವನು ಯಾವ ಕ್ರಮದಲ್ಲಿ ಬದುಕಬೇಕೆಂದು ನಿರ್ಧರಿಸುತದೆ; ಹೊಸ ಹೊಸ ಯಾಂತ್ರಿಕ ಸಂಶೋಧನೆಗಳ ಯೋಜನೆಯನ್ನು ತಯಾರಿಸುತದೆ. ವಿಶ್ವ ಸಮಿತಿ ಹಾಕಿದ ಯೋಜನೆಗಳನ್ನು ಕಾರ್ಯರೂಪದಲ್ಲಿ ಎರಕ ಹೊಯ್ಯುವುದು ಪ್ರಾಂತಿಕ ಮತ್ತು ಕೇಂದ್ರ ಸಮಿತಿಗಳ ಕೆಲಸ."

"ನಿಮ್ಮ ರಾಜ್ಯಾಂಗ ರಚನೆಯಲ್ಲಿ ವಿಜ್ಞಾನಿಗಳದೇ ಮೇಲುಗೈ. ಪ್ರತಿಯೊಂದು ಸಮಿತಿಯಲ್ಲಿಯೂ ಅರ್ಧಕ್ಕೆ ಮೇಲ್ಪಟ್ಟು ನೀವೇ ಆಗಿದೀರಿ." ಅವರ ಶಾಸನಕ್ರಮ ಸರ್ವಾಧಿಕಾರದ ಒಂದು ರೂಪಭೇದವೆಂದು ನನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸಿದೆ. "ವಿಶ್ವ ಸಮಿತಿಯಲ್ಲಿ ನಿಮ್ಮ

ವಾತೆ ನಡೆಯುವುದು; ಅದಕ್ಕೆ ಆತಂಕವನ್ನುಂಟುಮಾಡುವವರು ಯಾರೂ ಇಲ್ಲ."

"ಜನರಲ್ಲಿ ವಿಜ್ಞಾನಿಗಳೇ ಅತಿ ಬುದ್ಧಿಶಾಲಿಗಳೆಂಬುದನ್ನು ನೀನು ಒಪ್ಪಲೇ ಬೇಕು. ಪ್ರಪಂಚದ ಆಡಳಿತದ ಹೊಣೆಗಾರಿಕೆ ಮೇಧಾವಿಗಳ ಕೈಗೆ ಸಿಕ್ಕಬೇಕಲ್ಲದೆ, ಮಂದಬುದ್ಧಿಯ ಅಪರಿಪಕ್ವ ಜೀವಿಗಳ ಕೈಗಲ್ಲ. ನಾವು ಆಡಳಿತ ಸೂತ್ರವನ್ನು ಕೈಗೊಂಡಂದಿನಿಂದ, ಅನೇಕ ತಲೆಮಾರುಗಳಿಂದ ಮಾನವನಿಗೆ ಪರಂಪರೆಯಾಗಿ ಅಂಟಿದ್ದ ಯುದ್ಧ, ರೋಗ, ಬರಗಾಲ ಮೊದಲಾದ ಕಾಹಿಲೆಗಳನ್ನು ನಿವಾರಿಸಿದೆವು."

"ನೀವು ಪ್ರಪಂಚದಲ್ಲೆಲ್ಲಾ ಒಂದೇ ಭಾಷೆಯನ್ನು ಉಪಯೋಗಿಸುವಿರಾ?"

"ಇಲ್ಲ." ವಿಜ್ಞಾನಿಗಳು ಮಾರ್ನುಡಿದರು. "ಏಕಭಾಷೆ ಇನ್ನೂ ಬಳಕೆಯಲ್ಲಿ ಬಂದಿಲ್ಲ. ಈ ದಕ್ಷಿಣ ಮತ್ತು ಉತ್ತರ ಹಿಂದೂಸ್ಥಾನ, ಬರ್ಮಗಳಲ್ಲಿ ಹಿಂದೂಸ್ಥಾನೀ ಭಾಷೆಯನ್ನು ಉಪಯೋಗಿಸುತಾರೆ. ಚೀನ, ಶಾಂತ ಸಾಗರದ ದ್ವೀಪ ಸಮುದಾಯಗಳು, ಮಲಯ ಮೊದಲಾದ ಮೂಡಣದ ನಾಡುಗಳಲ್ಲಿ ಚೀನೀ ಭಾಷೆ ಬಳಕೆಯಲ್ಲಿದೆ. ಮಧ್ಯ ಆಸ್ಯದಿಂದ ಮುಂದೆ ರಷ್ಯನ ಭಾಷೆ ಪ್ರಚಾರದಲ್ಲಿದೆ. ಯುರೋಪಿನ ಇತರ ಭಾಗಗಳಲ್ಲಿ ಜರ್ಮನ್ ಮತ್ತು ಫ್ರೆಂಚ್ ಇವೆರಡು ಬೆರತಾದ ಒಂದು ಹೊಸ ಭಾಷೆ ಉಪಯೋಗದಲ್ಲಿದೆ. ಅರೇಬಿಯಾದಿಂದ ಹಿಡಿದು ಆಫ್ರಿಕದ ಉತ್ತರ ಭಾಗಗಳಲ್ಲೆಲ್ಲಾ ಅರಬೀ ಭಾಷೆಯನ್ನೇ ಬಳಸುತಾರೆ. ದಕ್ಷಿಣ ಆಫ್ರಿಕ ಸ್ಪಾನಿಷ ಭಾಷೆಯ ನೆಲೆಯಾಗಿದೆ. ಉತ್ತರ ಅಮೇರಿಕ ಮತ್ತು ದಕ್ಷಿಣ ಅಮೇರಿಕಗಳು ಇಂಗ್ಲೀಷು ಭಾಷೆಯ ಮನೆಗಳೆನಿಸಿವೆ. ಸಾವಿರ ವರುಷಗಳ ಹಿಂದೆ ಇದ್ದಂತೆ ಪ್ರಪಂಚದ ಯಾವ ಭಾಷೆಗಳೂ ಈಗ ಇಲ್ಲ. ನಾವು ಬಳಸುವ ಹಿಂದೂಸ್ಥಾನಿಯಲ್ಲಿ ಹತ್ತಕ್ಕೆ ಮೂರರಂತೆ ಇತರ ಭಾಷೆಗಳ ಪದಗಳು ಕಲೆತು ಹೋಗಿವೆ."

"ಹತ್ತೆಂಟು ಭಾಷೆಗಳನ್ನು ಪ್ರಪಂಚದ ಜನರು ಬಳಸುವುದರಿಂದ ವಿಶ್ವ ಜನಾಂಗದ ಆಡಳಿತಕ್ಕೆ ತೊಡಕಲ್ಲವೇ?" ಎದೆಯಲ್ಲಿ ಮೂಡಿದ ಸಂದೇಹವನ್ನು ನಾನು ಹೊರಗೆಡವಿದೆ.

"ಇಲ್ಲ. ಎಂದೂ ಭಾಷಾವ್ಯತ್ಯಾಸದಿಂದ ಆಡಳಿತಕ್ಕೆ ಆತಂಕ ಒದಗಿಲ್ಲ. ವಿಜ್ಞಾನಿಗಳು ಪ್ರಪಂಚದ ಎಂಟು ಭಾಷೆಗಳಲ್ಲಿ ನಾಲ್ಕು ಭಾಷೆಗಳನ್ನು ಕಲಿಯಲೇ ಬೇಕು. ಈಗ ನನ್ನನ್ನೇ ತೆಗೆದುಕೋ. ನನಗೆ ಹಿಂದೂಸ್ಥಾನಿ, ಚೀನಿ, ಅರಬಿ ಮತ್ತು ರಷ್ಯನ್ ಮತ್ತು ಇಂಗ್ಲಿಷ್ ಹೀಗೆ ಐದು ಭಾಷೆಗಳು ಗೊತ್ತಿವೆ. ವಿಶ್ವ ಸಮಿತಿಯ ವ್ಯವಹಾರಗಳೆಲ್ಲ ಚೀನೀ ಮತ್ತು ರಷ್ಯನ್ ಈ ಎರಡು ಭಾಷೆಗಳಲ್ಲಿ ಜರಗುತಲಿವೆ."

"ಅದೇನು, ಚೀನೀ ಮತ್ತು ರಷ್ಯನ್ ಭಾಷೆಗಳಿಗೆ ಅಷ್ಟೊಂದು ಪ್ರಾಧಾನ್ಯತೆ ಬಂದುದು?"

"ಜನಸಂಖ್ಯೆಯಲ್ಲಿ ಚೀನಿಯರನ್ನು ಯಾವ ಪ್ರಾಂತದವರೂ ಮೀರಿಸರು. ಅವರ ಜನಸಂಖ್ಯೆ ಸುಮಾರು ಮುನ್ನೂರುಕೋಟಿಯಿದೆ. ಹದಿನೆಂಟು ಪ್ರಾಂತಗಳಲ್ಲಿ ಚೀನೀ ಭಾಷೆಯನ್ನು ಬಳಸುತಾರೆ. ರಷ್ಯನ್ ಭಾಷೆಯಾಡುವವರು ಇನ್ನೂರೈವತ್ತು ಕೋಟಿಯಿದಾರೆ. ಹದಿನಾಲ್ಕು ಪ್ರಾಂತಗಳಲ್ಲಿ ಅವರು ಪ್ರಬಲರಾಗಿದಾರೆ. ಈ ಎರಡು ಭಾಷೆಗಳನ್ನಾಡುವ ಜನರಲ್ಲಿ ವಿಜ್ಞಾನಿಗಳ ಸಂಖ್ಯೆ ಬಹು ಹೆಚ್ಚು. ನಮ್ಮಲ್ಲಿ ನೂರಕ್ಕೆ ಇಪ್ಪತ್ತರಂತೆ ವಿಜ್ಞಾನಿಗಳಿದ್ದರೆ, ಈ ಎರಡು ಭಾಷೆಗಳನ್ನಾಡುವವರಲ್ಲಿ ನೂರಕ್ಕೆ ಮೂವತ್ತರಂತೆ ಇದಾರೆ. ಆದುದರಿಂದಲೇ ನೂತನ ಸಂಶೋಧನೆಗಳು, ಹೊಸ ಯಂತ್ರಗಳು, ನೂತನ ವೈಜ್ಞಾನಿಕ ಸಿದ್ಧಾಂತಗಳು, ಇವೆಲ್ಲಾ ಈ ಎರಡು ಭಾಷೆಯವರಿಂದಲೇ ಮಾನವ ಸಮಾಜಕ್ಕೆ ಹೆಚ್ಚಾಗಿ ದೊರೆತು, ವಿಶ್ವ ಜನಾಂಗದ ಸಂಪದವನ್ನು ವಿಪುಲಗೊಳಿಸುತವೆ. ಅವರು ವಿಶ್ವ ಸಮಿತಿಯಲ್ಲಿ ತಮ್ಮ ಸೇವೆಗಳಿಂದ ಪ್ರಾಮುಖ್ಯವಾದ ಸ್ಥಾನವನ್ನು ಗಳಿಸಿದಾರೆ."

"ಹಿಂದೂಸ್ಥಾನೀ ಮಾತಾಡುವವರಿಗೆ ನಿಮ್ಮ ವಿಶ್ವ ಸಮಿತಿಯಲ್ಲಿ ಯಾವ ಸ್ಥಾನವಿದೆ?" ನಮ್ಮ ತಾಯ್ನಾಡು ಇಂದಿನಂತೆಯೋ, ಮುಂದೆ ಯಾದರೂ ಬೇರೊಂದು ಭಾಷೆಯವರ ತುಳಿತಕ್ಕೆ ಸಿಲುಕಿ, ಏಳಲಾಗದೇ ತೆವಳುತಲಿರಬಹುದೇ ಎಂಬ ಅಂಜಿಕೆಯ ಮುಗಿಲೊಂದು ನನ್ನ ಚಿತ್ತವನ್ನು ಕವಿದಿತು.

"ಹಿಂದೂಸ್ಥಾನೀ ಮಾತಾಡುವವರು ಎಂಟು ಪ್ರಾಂತಗಳಲ್ಲಿದಾರೆ. ಜನಸಂಖ್ಯೆ ಸುಮಾರು ಇನ್ನೂರು ಕೋಟಿ." ವಿಜ್ಞಾನಿಗಳು ಮಾರ್ನುಡಿದರು. "ವಿಶ್ವ ಸಮಿತಿಯಲ್ಲಿ ಹಿಂದೂಸ್ಥಾನೀ ಮಾತಾಡುವವರ ನೆಲೆ ಮೂರನೆಯ,

ದಾಗಿದೆ. ಈ ಮೂರು ಭಾಷೆಗಳನ್ನಾಡತಕ್ಕ ಪ್ರತಿನಿಧಿಗಳ ತೀರ್ಮಾನದಂತೆ ವಿಶ್ವ ಸಮಿತಿ ವರ್ತಿಸುತಲಿದೆ. ಆದರೆ ದೇಶ, ಭಾಷೆ, ಮತ ಎಂದು ಹೇಳಿ ಹೆಮ್ಮೆಪಡುವುದು ಮನಸ್ಸಿಗೆ ತಗಲಿದ ಒಂದು ರೋಗ. ನಮ್ಮ ಬೇಕುಬೇಡ ಗಳನ್ನು ಬೇರೊಂದು ಭಾಷೆಯವರ ಮೇಲೆ ಹೇರುವುದು ಅವಿವೇಕ. ನಮ್ಮ ಮುಂದೆ ಬಂದ ಪ್ರತಿಯೊಂದು ಸಮಸ್ಯೆಯನ್ನೂ, ನಾವು ಮಾನವರೆಂದು ಬಗೆದು ಮಾನವ ಸಮಾಜದ ಹಿತದೃಷ್ಟಿಯಿಂದ ಬಿಡಿಸುತಿದೇವೆಯೇ ಹೊರತು ಒಂದೊಂದು ಭಾಷೆಯವರ ಹಿತದೃಷ್ಟಿಯಿಂದಲ್ಲ. ರಾಷ್ಟ್ರೀಯತೆಯ ಕಾಲದಲ್ಲಿ, ಮತ್ತು ಜನತಾ ಯುಗದ ಪ್ರಾರಂಭ ಘಟ್ಟದಲ್ಲಿ ಭಾಷೆಗಳ ಸಮಸ್ಯೆಗಳು ಹೇರಳ ವಾಗಿದ್ದುವು. ಆದರೆ ವೈಜ್ಞಾನಿಕ ಯುಗದ ಮನುಷ್ಯನಿಗೆ ಭಾಷೆಗಳು ಒಂದು ತೊಡಕಾಗಿಲ್ಲ. ನಮ್ಮ ವಿಶ್ವ ಜನಾಂಗದ ನುಡಿ ಎಂಟು ಬಗೆಯಾದರೂ, ಒಂದೇ ಮನೆಯಲ್ಲಿ ವಾಸಿಸುವ ಎಂಟು ಮಂದಿ ಗೆಳೆಯರಂತೆ ನಾವು ಬಾಳು ತಿದೇವೆ. ”

“ ನಿಮ್ಮ ಸಮಾಜದಲ್ಲಿ ಅಂಗಡಿ ಮನೆಗಳನ್ನೂ ನಾಣ್ಯಗಳ ಚಲಾವಣೆ ಯನ್ನೂ ನಾನು ನೋಡಲೇ ಇಲ್ಲವಲ್ಲ. ” ನಮ್ಮ ಮರಿಮಕ್ಕಳ ಆರ್ಥಿಕ ಪರಿಸ್ಥಿತಿಗಳನ್ನು ಅರಿತುಕೊಳ್ಳಲು ನಾನು ಹವಣಿಸಿದೆ. “ ನಿಮ್ಮ ವೈಜ್ಞಾನಿಕ ಸರಕಾರ ವ್ಯಾಪಾರ ವಹಿವಾಟುಗಳನ್ನು ತಡೆಗಟ್ಟಿದಂತಿದೆ. ”

“ ಮನುಷ್ಯನ ನಿತ್ಯೋಪಯೋಗಕ್ಕೆ ಅಗತ್ಯವೆನಿಸಿವ ಸಾಮಗ್ರಿಗಳ ಉತ್ಪಾದನೆ ಮತ್ತು ವಿತರಣೆಗಳು ಒಂದು ಬಣದವರ ವಶದಲ್ಲಿದ್ದಾಗ, ಸಾಮಗ್ರಿ ಗಳನ್ನು ಪೂರೈಸುವ ಬಗೆಯನ್ನು ಸಮಾಜ ವ್ಯಾಪಾರವೆಂದು ಕರೆಯುತಿದ್ದಿತು. ಈ ವ್ಯಾಪಾರದಿಂದ ಹಲವರು ಹಣ ಸಂಪಾದಿಸಿ ಲಕ್ಷಾಧೀಶ್ವರರಾಗುತಿದ್ದರು. ಇವರ ಹಿಡಿಯೊಳಗೆ ಮಡಿಯುವವರು ಸಿಲುಕಿ ನರಳುತಿದ್ದರು. ಈಗ ಆ ಪರಿ ಸ್ಥಿತಿ ನಮ್ಮ ವೈಜ್ಞಾನಿಕ ಯುಗದಲ್ಲಿ ಇಲ್ಲ. ವಸ್ತುಗಳ ಉತ್ಪಾದನೆ ಮತ್ತು ಪೂರೈಕೆಗಳನ್ನು ಸಮಾಜ ತನ್ನ ಸ್ವಾಧೀನಪಡಿಸಿಕೊಂಡಿದೆ. ವೈಯಕ್ತಿಕ ವಾಗಿ ಯಾರೂ ಸಾಮಗ್ರಿಗಳನ್ನು ಉತ್ಪಾದಿಸಕೂಡದು. ಮನುಷ್ಯ ಜೀವ ನಕ್ಕೆ ಅಗತ್ಯವೆನಿಸಿದ ಸರಕುಗಳೆಲ್ಲ ನವೀನ ರೀತಿಯ ಯಂತ್ರಗಳಿಂದ ಸಿದ್ಧ ವಾಗುತವೆ. ಆ ಯಂತ್ರಗಳ ಚಾಲನೆಗೆ ಅಗತ್ಯವೆನಿಸಿದ ಶಕ್ತಿ, ನೀರು, ಅಸಿದ್ಧ ವಸ್ತುಗಳು ಇವುಗಳನ್ನು ಒದಗಿಸಲು ಹಲಕೆಲವು ವ್ಯಕ್ತಿಗಳಿಂದ ಸಾಧ್ಯವಾಗದು. ಈ ಯಂತ್ರಗಳ ಬೆನ್ನಹಿಂದೆ ವಿಜ್ಞಾನಿಗಳ ಮತ್ತು ನುರಿತ ಕೆಲಸಗಾರರ ತಂಡವೇ

ಇರಬೇಕು. ಇಡೀ ಪ್ರಪಂಚದ ಜನರೆಲ್ಲರೂ ಒಂದೇ ಕುಟುಂಬದವರಂತೆ ಪರಸ್ಪರ ಸಹಕರಿಸುತಲಿರುವರು; ಈ ಬೃಹತ್ಕಾರ್ಯಗಳನ್ನು ಅಚ್ಚುಕಟ್ಟಾಗಿ ವ್ಯಕ್ತಿಗಳು ದಕ್ಷತೆಯಿಂದ ನಡೆಸಲಾರರು. ವಿತರಣೆಯನ್ನಾದರೂ ಪ್ರಾದೇಶಿಕ ಸಮಿತಿಗಳು ತಮ್ಮ ಕೈಯಲ್ಲಿಯೇ ಇಟ್ಟುಕೊಂಡಿವೆ. ಬೇಸಾಯ ಮತ್ತು ಆಹಾರ ವಿಭಾಗಗಳು ಪ್ರತಿಯೊಬ್ಬ ಮಾನವನಿಗೆ ಆಹಾರ ದೊರಕುವಂತೆ ನೋಡಿಕೊಳ್ಳುತಿವೆ. ಆಹಾರ ವಿಭಾಗ ಸಿದ್ಧವಾದ ಆಹಾರಗಳನ್ನು ತಯಾರಿಸಿ ಭೋಜನಶಾಲೆಗಳಿಗೆ ಒದಗಿಸುತದೆ. ಪ್ರತಿ ನಾಲ್ಕು ತಾಸಿಗೊಮ್ಮೆ ಮನುಷ್ಯ ಯಾವ ಭೋಜನಶಾಲೆಯಲ್ಲಾದರೂ ಸರಿ ತನ್ನ ಪಾಲಿನ ಆಹಾರವನ್ನು ಪಡೆಯಬಹುದು. ಅವನೆಂದೂ ಹಸಿವೆಯಿಂದ ನರಳಬೇಕಾಗಿ ಬರದು. ಅವನು ಯಾವ ವೇಳೆಯಲ್ಲಿ ಬೇಕಾದರೂ ಆಹಾರ ಪಡೆಯಬಹುದು. ವಸ್ತ್ರವಿಭಾಗ ಒಬ್ಬ ಮನುಷ್ಯನಿಗೆ ಒಂದು ವರುಷಕ್ಕೆ ಇಪ್ಪತ್ತೆಂಟು ಜೋಡಿ ಸಮವಸ್ತ್ರಗಳನ್ನು ಒದಗಿಸುತದೆ. ಸಾಧಾರಣವಾಗಿ ಒಬ್ಬ ಮನುಷ್ಯನಿಗೆ ವರುಷವೊಂದಕ್ಕೆ ಹದಿನಾರು ಜೊತೆ ಸಮವಸ್ತ್ರಗಳಿದ್ದರೆ ಸಾಕು. ಪ್ರತಿಯೊಬ್ಬನಿಗೂ ವಾಸಿಸಲು ಎರಡು ಕೋಣೆಗಳಿವೆ. ಆತ ಸಂಸಾರಿಗನಾದರೆ ಐದು ಕೋಣೆಗಳು ದೊರೆಯುತವೆ. ಪ್ರತಿ ಐದು ಮಂದಿಯ ನಿವಾಸಕ್ಕೆ ಒಂದರಂತೆ ಆಕಾಶವಾಣಿಯ ಗ್ರಾಹಕ ಯಂತ್ರಗಳನ್ನು ನೀಡಿದೇವೆ. ಜನರು ತಮಗೆ ಹಿತವೆನಿಸಿದ ಸಂಗೀತ ಮತ್ತು ಧ್ವನಿಸಾಹಿತ್ಯವನ್ನು ಬಿಡುವಿನ ವೇಳೆಯಲ್ಲಿ ಆಸ್ವಾದಿಸಬಹುದು. ಪ್ರತಿ ಐವತ್ತು ಮಂದಿಗೆ ಒಂದರಂತೆ ಸ್ನಾನದ ಮನೆಗಳಿವೆ. ಅಲ್ಲಿ ಇಪ್ಪತ್ತುನಾಲ್ಕು ತಾಸೂ ಹಿತೋಷ್ಣವಾದ ಬಿಸಿನೀರೂ ಸ್ನಾನದ ಇತರ ಉಪಕರಣಗಳೂ ಇರುತವೆ. ಆಯಾ ಕೇಂದ್ರದ ಪರಿಧಿಯಲ್ಲಿ ಮನುಷ್ಯ ಯಾವ ತಡೆಯೂ ಇಲ್ಲದೆ ಸಂಚರಿಸಬಹುದು; ಕೇಂದ್ರ ಸಮಿತಿಯ ವಾಹನಗಳನ್ನು ಬಳಸಿಕೊಳ್ಳಬಹುದು; ತಿಂಗಳಿಗೆ ಐದು ಸಾವಿರ ಮೈಲು ದೂರ ಆತ ವಿಮಾನಗಳ ಮೇಲೆ ಸಂಚರಿಸಲು ಸ್ವಾತಂತ್ರ್ಯವಿದೆ. ವಾಹನ ಶಾಖೆಯ ಮುಖ್ಯಾಧಿಕಾರಿಯ ಚೀಟಿಯೊಂದಿದ್ದರೆ ಸಾಕು; ಪ್ರಪಂಚದ ಯಾವ ಮೂಲೆಗೆ ಬೇಕಾದರೂ ಆತ ತೆರಳಬಲ್ಲ. ಹೋದೆಡೆ. ಗಳಲ್ಲೆಲ್ಲಾ ಆಹಾರ, ವಸತಿ ಮತ್ತು ವಸ್ತ್ರಗಳು ಉಚಿತವಾಗಿ ದೊರಕುವುವು. ಎರಡು ವರುಷಗಳಿಗೊಮ್ಮೆ ಇಡೀ ಭೂಮಂಡಲವನ್ನೇ ಆತ ಸುತ್ತಿಬರಬಹುದು ಹತ್ತು ವರುಷಗಳಿಗೊಮ್ಮೆ ಮಂಗಳ ಗ್ರಹಕ್ಕೆ ತೆರಳಬಹುದು. ಅವನ ಮನೋರಂಜನೆಗೆ ಚಲಚಿತ್ರ, ಟೆಲಿವಿಷನ್, ಆಕಾಶವಾಣಿ ಮತ್ತು ಚಿತ್ರಶಾಲೆಗಳಿವೆ.

ವಿಹಾರಕ್ಕೋಸುಗ ಪ್ರತಿ ನಗರದಲ್ಲಿಯೂ ಹತ್ತಾರು ಉದ್ಯಾನಗಳನ್ನು ಏರ್ಪಡಿಸಿದೇವೆ. ವೈಜ್ಞಾನಿಕ ಯುಗದ ಮನುಷ್ಯ ತನ್ನ ಬಿಡುವು ವೇಳೆಯನ್ನು ಸಂಚಾರದಲ್ಲಿ ವಿಹಾರದಲ್ಲಿ ಮತ್ತು ಮನೋರಂಜನೆಯಲ್ಲಿ ಕಳೆವನು. ಪ್ರತಿ ಐದು ವರುಷಗಳಿಗೊಮ್ಮೆ ಸಾಮಾನ್ಯಜನರ ಸುಖ ಸೌಕರ್ಯಗಳನ್ನು ಪರಿಶೋಧಿಸುತೇವೆ. ನಾಲ್ಕಾರು ವರುಷಗಳ ಹಿಂದೆ ಇದ್ದಂತೆ ಅವನಿಗೆ ಈಗ ಕುಟುಂಬದ ಹೊರೆಯಿಲ್ಲ. ಅವನ ಸಂತತಿಯ ಲಾಲನೆ ಪಾಲನೆಗಳನ್ನು ಶಿಶುಮಂದಿರಗಳೂ ಶಿಕ್ಷಣ ಕೇಂದ್ರಗಳೂ ನೋಡಿಕೊಳ್ಳುತವೆ. ಇಷ್ಟೆಲ್ಲ ಸುಖ ಸೌಕರ್ಯಗಳನ್ನು ಒದಗಿಸಿದ ಸಮಾಜಕ್ಕೆ ಅವನು ಸಲ್ಲಿಸಬೇಕಾದ ಸೇವೆಯೆಂದರೆ, ಒಂದು ವಾರದಲ್ಲಿ ನಾಲ್ಕು ತಾಸುಗಳ ದುಡಿತ ಮಾತ್ರ. ''

'' ನಿಮ್ಮ ಸರಕಾರ ನಾಣ್ಯಗಳನ್ನು ಬಳಸುವುದಿಲ್ಲವೇಕೆ ? ''

'' ನಮ್ಮ ಜನಾಂಗದಲ್ಲಿ ನಾಣ್ಯಗಳ ಅಗತ್ಯವೇ ಬೀಳುವುದಿಲ್ಲ. ಉತ್ಪಾದನೆ, ಪೂರೈಕೆ, ಉಪಯೋಗ ಈ ಮೂರು ವಿಭಾಗಗಳು ಪರಸ್ಪರ ಸಂಬಂಧವಿಲ್ಲದ ಬೇರೆ ಬೇರೆ ಜನರ ಅಧೀನದಲ್ಲಿದ್ದಾಗ ನಾಣ್ಯಗಳ ಅಗತ್ಯತೆಯುಂಟಾಗುತದೆ. ಕೇಂದ್ರ ಸಮಿತಿಗಳೇ ಉತ್ಪಾದನೆ ಮತ್ತು ಪೂರೈಕೆಗಳನ್ನು ಎಸಗುತಲಿವೆ. ಜನಸಾಮಾನ್ಯರೆ ಉಪಯೋಗಿಗಳು. ಉತ್ಪಾದಿಸಿದ ಸರಕುಗಳು ಜನರಿಗೆ ಉಪಯೋಗಪ್ರದವಾಗಬೇಕು ಎಂಬ ಗುರಿಯಲ್ಲದೆ, ಲಾಭ ಸಂಪಾದನೆಯ ಗುರಿ ಕೇಂದ್ರ ಸಮಿತಿಗಿಲ್ಲ. ಉತ್ಪಾದನೆಯ ಪ್ರಮಾಣಕ್ಕನುಗುಣವಾಗಿ, ಜನರಿಗೆ ಸಾಮುಗ್ರಿಗಳು ದೊರಕುತವೆ. ಕೇಂದ್ರದ ಅವಶ್ಯಕತೆ ಕಳೆದು ಮಿಕ್ಕಿದ ಸರಕುಗಳನ್ನು ನಾವು ಇತರ ಕೇಂದ್ರಗಳಿಗೆ ರವಾನಿಸುತೇವೆ. ಸರಕುಗಳ ಉಪಯುಕ್ತತೆಯ ಪ್ರಶ್ನೆಯಲ್ಲದೆ ಲಾಭದ ಪ್ರಶ್ನೆಯೇ ನಮ್ಮಲ್ಲಿಲ್ಲ. ಜನರ ಜೀವನದ ನೆಲೆ ಅಭಿವೃದ್ಧಿಗೊಂಡರೆ, ಅದಕ್ಕಿಂತ ಹಿರಿಯ ಲಾಭ ಬೇರೊಂದಿಲ್ಲ. ಐನೂರು ವರುಷಗಳ ಹಿಂದೆ ಜನರ ಜೀವನದ ಮಟ್ಟ ನೂರು ಎಂದಿದ್ದರೆ, ಈಗಿನ ಮಟ್ಟ ಎಂಟುನೂರಾಗುತದೆ. ಎಂದರೆ ಐದು ಶತಮಾನಗಳ ಕಾಲಾವಧಿಯಲ್ಲಿ ನಮ್ಮ ಜೀವನದ ನೆಲೆ ಎಂಟು ಪಾಲು ಹೆಚ್ಚಿದೆ. ಈ ವಿವರಣೆಯಿಂದ ನಮ್ಮ ಸಮಾಜದ ಆರ್ಥಿಕ ಸ್ಥಿತಿಯನ್ನು ನೀನೇ ಆಲೋಚಿಸಿಕೋ. ''

ಈ ಪರಿಯಾಗಿ ವಿಜ್ಞಾನಿಗಳು ತಮ್ಮ ಸುದೀರ್ಘವಾದ ಸಂಭಾಷಣೆಯನ್ನು ಮುಗಿಸಿದರು. ಅವರ ಹೇಳಿಕೆಯ ಪ್ರಕಾರ ಆ ಕಾಲದ ಸಮಾಜದಲ್ಲಿ ತಡೆ ತೊಡಕುಗಳಿಗೆ ಅವಕಾಶವೇ ಇಲ್ಲ. ಜೀವನ ಬಹು ಸರಳವಾದುದು; ಗ್ರಹಿಸ

ಲಾಗದಷ್ಟು ಸುಲಭವಾದುದು. ಒಂದು ದೊಡ್ಡ ಸಂಸಾರದ ಆಡಳಿತ ಸಾಗುವಂತೆ ಸುಲಲಿತವಾಗಿ ವಿಶ್ವಜನಾಂಗದ ಆಡಳಿತ ಜರಗುತಿದ್ದಿತು. ಇಷ್ಟು ಸುಲಭ ರೀತಿಯಲ್ಲಿ ಯಾರ ಸುಖ ಸೌಕರ್ಯಗಳಿಗೂ ತಡೆಯಾಗದಂತೆ ಸಮಾಜವನ್ನು ಪುನರ್ರಚಿಸಿದ ವಿಜ್ಞಾನಿಗಳು ನಿಜವಾಗಿಯೂ ಮೇಧಾವಿಗಳೇ ಸರಿ. ಆದರೆ ವೈಜ್ಞಾನಿಕ ಯುಗ ಸರ್ವಾಂಗ ಸುಂದರವಾದುದಲ್ಲ. ಮಾನವ ಸಹಜವೆನಿಸಿದ ಗುಣಗಳೇ ಮನುಷ್ಯನಿಂದ ಮಾಯವಾಗತೊಡಗಿದ್ದುವು. ಅವರ ಬದುಕು ಯಾಂತ್ರಿಕವಾದುದಾಗಿತ್ತು. ಸತಿಪತಿಗಳಾಗಿ ಬಾಳುವ ದಾಂಪತ್ಯ ಜೀವನ ಶಿಥಿಲವಾಗಿತ್ತು. ವಿಜ್ಞಾನಿಗಳೆಳೆದ ಗೆರೆಯನ್ನು ಮೀರಬಾರದೆಂಬ ದಾಸ್ಯ ಮನೋವೃತ್ತಿ ಜನಸಾಮಾನ್ಯರಲ್ಲಿ ಮೂಡಿತ್ತು. ವಿಕಲಾಂಗರಾಗಿ ಜನಿಸಿದ ಶಿಶುಗಳನ್ನು, ಮಾನಸಿಕ ರೋಗಗಳಿಗೆ ತುತ್ತಾದ ಬಡಪಾಯಿಗಳನ್ನು, ಪ್ರಾಯ ಮೀರಿದ ಹಳಬರನ್ನು ವಿದ್ಯುತ್ತಿನ ಹೊಡೆತಕ್ಕೆ ಗುರಿಪಡಿಸುವುದು ನನಗೆ ರಾಕ್ಷಸತನವಾಗಿ ತೋರಿತು. ಮಾನವ ಬುದ್ಧಿ ಎಷ್ಟು ವಿಕಾಸವನ್ನೈದಿದರೂ ಅಪರಿಪೂರ್ಣವಾದುದೇ. ಅವನು ನಿರ್ಮಿಸಿದ ಸಮಾಜದಲ್ಲಿ ನ್ಯೂನತೆಗಳು ಇದ್ದೇ ಇರುತವೆ.

ನಾನು ಉಲಿಯದಿಹುದನ್ನು ಕಂಡು ವಿಜ್ಞಾನಿಗಳು ಪ್ರಶ್ನಿಸಿದರು. "ಏನನ್ನು ಆಲೋಚಿಸುತಿರುವೆ ?"

"ವೈಜ್ಞಾನಿಕ ಯುಗದ ಮಾನವನ ಬದುಕಾದರೂ ಸರ್ವಾಂಗ ಸುಂದರವಾದುದಲ್ಲ."

"ನಮ್ಮ ಎಸಕಗಳಲ್ಲಿ ನ್ಯೂನತೆಗಳಿಲ್ಲೆಂದು ನಾವು ಎದೆ ತಟ್ಟಿ ಹೇಳಿಕೊಳ್ಳುವುದಿಲ್ಲ. ತಮ್ಮ ದಾರಿ ಕುಂದುಕೊರತೆಗಳಿಲ್ಲದುದು; ಸರ್ವಾಂಗ ಸುಂದರವಾದುದು ಎಂದು ಹೇಳಿಕೊಳ್ಳುವ ಪರಂಪರೆ ಧರ್ಮಬೋಧಕರಿಗೆ ಸೇರಿದುದು. ನಮ್ಮ ವಿಶ್ವಜನಾಂಗದಲ್ಲಿರುವ ಕುಂದುಕೊರತೆಗಳನ್ನು ವಿಜ್ಞಾನಿಗಳಷ್ಟು ಅರಿತವರು ಬೇರಿನ್ನಾರೂ ಇರಲಾರರು. ಆ ಲೋಪ ದೋಷಗಳನ್ನು ಇಲ್ಲವಾಗಿಸಲೋಸುಗ ನಮ್ಮ ಬುದ್ಧಿ ಸಾಹಸಗಳು ವೆಚ್ಚವಾಗುತಲಿವೆ. ಆದರ್ಶವೆಂಬುದು ಮನುಷ್ಯನ ಕಲ್ಪನಾ ಜಗತ್ತಿನ ಸಂಪತ್ತು. ಅದು ಹೊರಗಿನ ಪ್ರಪಂಚದಲ್ಲಿ ಯಥಾರ್ಥವಾಗಿ ರೂಪಾಂತರಗೊಳ್ಳುವಾಗ. ಕಲ್ಪನೆಯಲ್ಲಿ ಮಿರುಗುತಿದ್ದ ಸಹಜ ಗುಣಗಳು ಆ ಯಥಾರ್ಥದಲ್ಲಿ ನೋಡಸಿಗುವುದಿಲ್ಲ."

ವಿಜ್ಞಾನಿಗಳ ನುಡಿ ದೇವರ ನೆನಹನ್ನು ನನ್ನ ಮೆದುಳಿನಲ್ಲಿ ಮೂಡುವಂತೆ

ಮಾಡಿತು. ನಮ್ಮ ಮರಿಮಕ್ಕಳ ಧಾರ್ಮಿಕ ಜೀವನ ಆವ ಪರಿಯದೋ ಎಂದು ಅರಿತುಕೊಳ್ಳಲು ನನ್ನ ಬುದ್ಧಿ ಹವಣಿಸಿತು. ಆದುದರಿಂದ ನಾನು ಪ್ರಶ್ನಿಸಿದೆ. "ನಿಮ್ಮ ನಗರಗಳಲ್ಲಿ ಗುಡಿ ದೇಗುಲಗಳಿಲ್ಲೇ ?"

"ಗುಡಿ ದೇಗುಲಗಳೆಂಬ ನುಡಿ ನಮ್ಮಲ್ಲಿ ಬಳಕೆಯಲ್ಲಿಲ್ಲ."

"ದೇವರ ಪೂಜೆಗೋಸುಗ ನಿರ್ಮಿಸಿದ ಗುಡಿಗಳು ಮಸೀದಿಗಳು ಮತ್ತು ಇಗರ್ಜಿಗಳು!" ನನ್ನ ಮಾತಿಗೆ ಒಂದು ಹೊಸ ಟೀಕೆಯನ್ನು ಸೇರಿಸಿದೆ.

"ದೇವರು ಈ ಪದ ನಿತ್ಯದ ಬಳಕೆಯಲ್ಲಿಲ್ಲ. ಅದು ಇನ್ನೂ ನಮ್ಮ ಸಂಶೋಧನೆಗೆ ನಿಲುಕದ ವಸ್ತುವಾಗಿದೆ. ನಮ್ಮ ಅರುವಿನ ಗೆರೆಯ ಆಚೆಗೆ ಅದು ನೆಲಸಿದೆ. ನಮ್ಮ ತಿಳಿವು ವಿಕಾಸಹೊಂದುತ್ತಾ ಹೋದಂತೆ, ಅದು ಹಿಂದೆ ಹಿಂದೆ ಸರಿಯುತಲಿದೆ. ಅದು ಕೇವಲ ಒಂದು ಬೌದ್ಧಿಕ ಕಲ್ಪನೆಯಾಗಿರಬಹುದು; ಮಾನವ ಬುದ್ಧಿಗೆ ನಿಲುಕದ ಒಂದು ಯಥಾರ್ಥವಾಗಿರಲೂ ಸಾಕು. ಮಾನವ ಸಮಾಜದ ನಿತ್ಯದ ಪ್ರಶ್ನೆಗಳನ್ನು ಬಿಡಿಸುವಾಗ, 'ದೇವರು' ಎಂಬ ನುಡಿಗೇ ಎಡೆಯಿಲ್ಲ. ಪ್ರಾಚೀನ ಸಂಸ್ಕೃತಿಯನ್ನು ಸಂಶೋಧಿಸುವ ಹಲಕೆಲ ಶಾಸ್ತ್ರಜ್ಞರು ನೂರಾರು ಧಾರ್ಮಿಕ ಗ್ರಂಥಗಳನ್ನು ತಿರುವಿಹಾಕಿದಾರೆ; ಆಯಾ ಕಾಲಗಳ ಮಾನವನ ಬೌದ್ಧಿಕ ಜೀವನದ ಚರಿತ್ರೆಯನ್ನು ಚಿತ್ರಿಸಿದಾರೆ. ಆ ಧಾರ್ಮಿಕ ಧರ್ಮಗ್ರಂಥಗಳು ಆಗಿ ಹೋದ ಮಾನವ ಸಂಸ್ಕೃತಿಯ ಚರಿತ್ರೆಗಳನ್ನು ಬರೆಯಲು ಉಪಯೋಗವಲ್ಲದೆ, ಅದಕ್ಕಿಂತ ಹೆಚ್ಚಿನ ಪ್ರಯೋಜನಗಳನ್ನು ನಾವು ಹೊಂದುತಲಿಲ್ಲ. ವೈಜ್ಞಾನಿಕ ಯುಗ ಉದಿಸುವ ಮುನ್ನ ಜನತಾ ಯುಗದಲ್ಲಿಯೇ ಮನುಷ್ಯನ ಭಾವಿಕತನ ಕೊನೆಗೊಂಡಿತ್ತು. ಭಂಡವಾಳಿ ಸಂಸ್ಕೃತಿ ಕೊನೆಗೊಂಡೊಡನೆಯೇ ಗುಡಿ ದೇಗುಲಗಳು ನಾಶವಾದುವು. ಮಾನವನು ಅವುಗಳನ್ನು ಜೀರ್ಣೋದ್ಧಾರ ಮಾಡುವ ಹವ್ಯಾಸಕ್ಕೆ ಇಳಿಯಲಿಲ್ಲ. ಹಲವು ಪ್ರಾಚೀನ ಕಟ್ಟಡಗಳು ಇನ್ನೂ ಉಳಿದಿವೆ. ಅವುಗಳನ್ನು ನಾವು ಶಿಲ್ಪಶಾಸ್ತ್ರದಲ್ಲಿ ಆದ ಪ್ರಗತಿಯ ಹೆಜ್ಜೆಗಳೆಂದು ಪರಿಗಣಿಸುತಿದೇವೆ. ನೀನು ಸಂಸ್ಕೃತಿ ಮತ್ತು ಚರಿತ್ರೆಯ ವಿಭಾಗಗಳಿಗೆ ಹೋದರೆ ಅಲ್ಲಿ ಶಿಲ್ಪಶಾಸ್ತ್ರದ ಚರಿತ್ರೆಯನ್ನು ಚಿತ್ರಗಳ ಮೂಲಕ ತಿಳಿಯಬಹುದು. ಸುಮಾರು ಒಂದು ನೂರೈವತ್ತು ಗ್ರಂಥಗಳಲ್ಲಿ ಈ ಚರಿತ್ರೆ ಚಿತ್ರಿತವಾಗಿದೆ."

ನಾನು ಮುಂಗೈಯಲ್ಲಿದ್ದ ಗಡಿಯಾರ ನೋಡಿದೆ. ಸಾವಿರ ವರುಷ ಭಾವಿಯಲ್ಲಿ ಬಾಳುತಿಹ ಮಾನವರ ಎಡೆಗೆ ಬಂದು ಎಂಟು ತಾಸುಗಳಾಗಿದ್ದುವು.

ಗಡಿಯಾರ ಸಂಜೆಯ ಆರು ತಾಸನ್ನು ತೋರಿಸುತ್ತಿದ್ದಿತು. ನಾನಿನ್ನು ಮರಳಬೇಕು; ದಿನದ ಅಲೆತದಿಂದ ನನ್ನ ಮೈಕೈಗಳು ಆಯಾಸಗೊಂಡಿದ್ದುವು. ತುತ್ತಿನ ಚೀಲದಲ್ಲಿ ಹಸಿವೆಯ ಕಿಚ್ಚು ಭುಗಿಲೆನುತ್ತಿದ್ದಿತು. ವಿಜ್ಞಾನಿಗಳೊಡನೆ ಮಾತಾಡಲು ಹೊರಟರೆ ಅದು ಕೊನೆಗೊಳ್ಳುವಂತಿರಲಿಲ್ಲ. ಆದುದರಿಂದ ಮಾತುಕತೆಗಳನ್ನು ನಿಲ್ಲಿಸಿ ಹೊರಡಲೆಂದು ಎದ್ದು ನಿಂತೆ. ಜತೆಯಲ್ಲಿ ಮೀನಾ ಇದ್ದುದರಿಂದ ದಾರಿತಪ್ಪುವ ಭಯವಿರಲಿಲ್ಲ.

ಕುಳಿತಿದ್ದ ಆಸನದಿಂದ ನಾನು ಎದ್ದುದನ್ನು ಕಂಡು ವಿಜ್ಞಾನಿಗಳೆಂದರು. “ ಏನು ಹೊರಟೆಯಲ್ಲ ? ಎಲ್ಲಿಗೆ ? ”

“ ಎಲ್ಲಿಗೆಂದು ಹೇಳಲಿ ? ನಿಮ್ಮ ನಗರದಲ್ಲಿ ತುಸು ಅಲೆದಾಡೋಣವೆಂದು ಹೊರಟೆ. ”

“ ನೀನು ನಮ್ಮ ಸಮಾಜದವನಲ್ಲವೆಂದರಿತೇ ನಿನ್ನನ್ನು ಸಂಗಡ ಕರೆದುಕೊಂಡು ಬಂದೆ. ಹಸಿವೆಯಾಗುತ್ತಿದ್ದರೆ ಹೇಳು. ಆಹಾರವನ್ನು ಇಲ್ಲಿಗೇ ತರಿಸುವೆನು. ನೀನು ನಮ್ಮ ಸಮಾಜಕ್ಕೆ ಸೇರಿದವನೂ ಅಲ್ಲ; ಗುರುಗ್ರಹದಿಂದ ಬಂದವನೂ ಅಲ್ಲ. ಮಂಗಳಿಗರು ನಿನ್ನಂತಿಲ್ಲ. ಹಾಗಾದರೆ ನೀನು ಯಾರು ? ಇದನ್ನರಿಯಲೋಸುಗವೇ ನಿನ್ನ ಬೆನ್ನಹಿಂದೆ ಇನಿತು ವೇಳೆ ಅಲೆದಾಡಿದೆ. ನೀನು ಕೇಳಿದ ಪ್ರಶ್ನೆಗಳಿಗೆಲ್ಲ ಉತ್ತರಿಸುತ್ತಾ ಬಂದೆ. ಈಗ ನೀನು ಯಾರೆಂಬುದನ್ನು ತಿಳಿಸು. ನೀನು ನನಗೊಂದು ಸಮಸ್ಯೆಯಾಗಿ ಪರಿಣಮಿಸಿದ್ದೀಯೆ ! ”

“ ನಾನು ಯಾರೆಂಬುದನ್ನು ವಿಜ್ಞಾನ ಮನಶ್ಶಾಸ್ತ್ರ ಸಂಶೋಧನೆಗಳು ಅರುಹಲಾರವೇ ? ” ನಾನು ವಿಜ್ಞಾನಿಗಳಿಗೆ ಮರುಸವಾಲು ಹಾಕಿದೆ.

“ ಅದು ಅಸಾಧ್ಯವೆಂದು ಭಾವಿಸದಿರು. ” ಈಗ ವಿಜ್ಞಾನಿಗಳ ನುಡಿ ಗಂಭೀರ ಭಾವವನ್ನು ತಳೆದಿತ್ತು. ಅಧಿಕಾರದ ಬಿಗು ಅದರಲ್ಲಿ ಹುದುಗಿತ್ತು. “ ಆದರೆ ಅನೇಕ ಬಗೆಯ ಪರೀಕ್ಷಣಗಳಿಗೆ ನಿನ್ನನ್ನು ಗುರಿಪಡಿಸಬೇಕು. ಮನಶ್ಶಾಸ್ತ್ರಜ್ಞರು, ಚರಿತ್ರಕಾರರು, ಸಮಾಜಶಾಸ್ತ್ರ ಪಂಡಿತರು ಇವರೆಲ್ಲ ಸೇರಿ ನಿನ್ನ ಮನಸ್ಸು, ಬುದ್ಧಿ, ನಿನ್ನ ನಡೆನುಡಿಗಳನ್ನು ಪರಿಶೋಧಿಸಬೇಕು; ನೀನು ಯಾವ ಕಾಲದವನೆಂದು ಅರಿಯಬೇಕು. ಈ ತೊಂದರೆಗಳೆಲ್ಲಾ ಏಕೆ? ಯಾವ ಕಾಲದವನು ನೀನೆಂದು ತಿಳಿಸಿಬಿಡು. ಇಲ್ಲದಿದ್ದರೆ ನೀನು ಯಾರೆಂದು ನಮಗೆ ಬಗೆಹರಿಯುವನಕ ನಮ್ಮ ನಡುವಿನಲ್ಲಿಯೇ ನೀನಿರಬೇಕಾಗುವುದು. ”

೬

ಹೊಸದೊಂದು ಗೋಜಿನಲ್ಲಿ ನಾನು ಸಿಕ್ಕುಬಿದ್ದಂತಾಯಿತು. ನನ್ನ ಹೊಲಬನ್ನರಿಯಲು ವಿಜ್ಞಾನಿಗಳು ಇನಿತು ವೇಳೆ ನನ್ನನ್ನು ಅನುಸರಿಸಿದರೆಂಬುದನ್ನು ನನ್ನ ಮಂದಬುದ್ಧಿ ಊಹಿಸಲಿಲ್ಲ. ನಿಮ್ಮನ್ನು ಇಲ್ಲಿ ಕಾದು ನಿಲ್ಲಿಸಿದ ನಾನು ಅಲ್ಲಿ ವೈಜ್ಞಾನಿಕ ಯುಗದ ಅಧಿಕಾರಿಯ ಸೆರೆಯಲ್ಲಿ ಕೊಳೆವ ಪರಿಸ್ಥಿತಿ ಬಂದೊದಗುವುದರಲ್ಲಿತ್ತು. ಒಂದು ವೇಳೆ ಕಾಲಯಂತ್ರದ ವೃತ್ತಾಂತವನ್ನು ಹೇಳಿದರೆ ವಿಜ್ಞಾನಿಗಳು ಅದನ್ನು ನಂಬುತಿರಲಿಲ್ಲ. ಕಾಲವನ್ನು ಅತಿಕ್ರಮಿಸಿ ದಾಟುವ ಯಂತ್ರವೊಂದನ್ನು ಕಂಡುಹಿಡಿಯಬಹುದೆಂಬ ಕಲ್ಪನೆ ವೈಜ್ಞಾನಿಕ ಯುಗದ ನಮ್ಮ ಮರಿಮಕ್ಕಳ ಬುದ್ಧಿಯಲ್ಲಿ ಮೂಡಿರಲಿಲ್ಲ. ಏನು ಮಾಡಬೇಕೆಂಬುದು ನನಗೆ ತಿಳಿಯದಾಯಿತು. ನಿಜವಾಗಿಯೂ ನಾನೊಂದು ಪೇಚಿನಲ್ಲಿ ಸಿಕ್ಕಿಬಿದ್ದೆ. ತುಸ ಆಲೋಚಿಸುತ್ತಾ ನಾನು ವಿಜ್ಞಾನಿಗಳ ಮೊಗ ನೋಡಿದೆ. ಅವರ ತೀಕ್ಷ್ಣವಾದ ನೋಟ ನನ್ನ ಮೊಗದಲ್ಲಿ ನೆಲಸಿತ್ತು. ಅವರು ನನ್ನ ಎದೆಯ ಅಂತರಾಳದಲ್ಲಿ ಮೂಡುತಿದ್ದ ಭಾವನೆಗಳನ್ನು ಓದಲು ಹವಣಿಸುತಿದ್ದರು. “ನಾನು ಯಾವ ಯುಗದವನು ನೀವೇ ಹೇಳಿ” ಎಂದೆ ನಾನು.

“ಖಚಿತವಾಗಿ ಹೇಳಬೇಕಾದರೆ ನಿನ್ನನ್ನು ಪ್ರಯೋಗಶಾಲೆಗೆ ಒಯ್ಯಬೇಕು. ಆದರೂ ನೀನು ಸುಮಾರು ಮೂರು ಶತಮಾನಗಳ ಹಿಂದಿನವನೆಂದು ಹೇಳಬಹುದು. ಮನುಷ್ಯ ಸಾಧಾರಣವಾಗಿ ನೂರೈವತ್ತು ವರುಷಗಳ ತನಕ ಬಾಳುತಿದಾನೆ. ನೀನು ಒಂದು ಶತಮಾನ ಕಾಲ ಹೆಚ್ಚು ಬದುಕಿದಿಯೆಂದು ಭಾವಿಸೋಣ. ಅಂತೂ ಮೂರು ಶತಮಾನಗಳ ಹಿಂದಿನವನು ನೀನಿರಬೇಕು.”

“ನಿಮ್ಮ ಊಹೆ ಶುದ್ಧ ತಪ್ಪು!” ನಾನು ನಗುತ್ತಾ ಹೇಳಿದೆ.

“ತಪ್ಪು!” ವಿಸ್ಮಯದಿಂದ ವಿಜ್ಞಾನಿಗಳು ತಮ್ಮ ಆಸನದಿಂದ ಎದ್ದರು.

“ಹೌದು. ನಿಮ್ಮ ಊಹೆ ಶುದ್ಧ ತಪ್ಪು; ಮೂರು ಶತಮಾನಗಳಲ್ಲ, ಒಂದು ಸಾವಿರ ವರುಷಗಳ ಹಿಂದಿನ ನಿಮ್ಮ ಮುತ್ತಯ್ಯ ನಾನು! ಸಾವಿರ ವರುಷಗಳ ಕಡಲನ್ನು ದಾಟಿ ನಿಮ್ಮ ಬಳಿಗೆ ಬಂದು ನಿಮ್ಮ ಎಸಕಗಳನ್ನು ನಿಟ್ಟಿಸುತಿದೇನೆ.”

“ಹುಚ್ಚು! ಹುಚ್ಚು!!” ವಿಜ್ಞಾನಿಗಳು ತಮ್ಮ ಕೈಗಳೆರಡನ್ನು ಮೇಲಕ್ಕೆತ್ತಿದರು. “ಅದು ಅಸಾಧ್ಯ; ಕಾಲವನ್ನು ಅತಿಕ್ರಮಿಸುವುದು ಅಸದಳ! ಅದು ಕಲ್ಪನೆಯ ಮೊಗ್ಗು!”

“ ಕಲ್ಪನೆಯು ಮೊಗ್ಗಲ್ಲ. ಕಾಲಯಂತ್ರದಿಂದ ನಾನು ಕಾಲವನ್ನು ದಾಟಿ ಭವಿಷ್ಯದ ಬಸಿರನ್ನೊಡೆದು ನಿಮ್ಮ ಬಳಿಗೆ ಬಂದಿದ್ದೇನೆ. ನನ್ನ ಸಂಗಡ ಬನ್ನಿ; ಕಾಲವನ್ನು ದಾಟಿ ಬಂದ ಯಂತ್ರವನ್ನು ತೋರಿಸಿಕೊಡುತ್ತೇನೆ.”

“ ನಿಜವಾಗಿಯೂ ! ” ಸೋಜಿಗ ಬೆರೆತ ಕಣ್ಣುಗಳಿಂದ ವಿಜ್ಞಾನಿಗಳು ನನ್ನ ಮೊಗ ನೋಡಿದರು. “ ಎಲ್ಲಿದೆ ನಿನ್ನ ಕಾಲಯಂತ್ರ ? ತೋರಿಸು. ಹತ್ತು ಶತಮಾನಗಳ ಹಿಂದೆ ಕಾಲವನ್ನು ಅತಿಕ್ರಮಿಸುವುದು ಸಾಧ್ಯವಾಗಿದ್ದರೆ ನಿಜವಾಗಿಯೂ ಅದು ಒಂದು ಹಿರಿಯ ಸಾಹಸವೇ ಸರಿ. ಈ ಕಾರ್ಯ ಹೇಗೆ ಸಾಧ್ಯವಾಯಿತು ? ”

ವಿಜ್ಞಾನಿಗಳಿಗೆ ಕಾಲಯಂತ್ರದ ಚರಿತ್ರೆಯನ್ನು ಸಂಕ್ಷೇಪವಾಗಿ ವಿವರಿಸಿ ಹೇಳಿದೆ. ನಾನು ನಿರ್ಮಿಸಿದ ಕಾಲವಾಹನವನ್ನೇರಿ ಗೈದ ಮೊದಲನೆಯ ಪ್ರವಾಸವನ್ನು ಅವರಿಗೆ ಬಿತ್ತರಿಸಿದೆ. ನನ್ನ ವೃತ್ತಾಂತವನ್ನು ಕೇಳಿ ವಿಜ್ಞಾನಿಗಳ ಸೋಜಿಗಕ್ಕೆ ಪಾರವಿಲ್ಲದಾಯಿತು. ಅವರು ನನ್ನ ಬೆನ್ನು ತಟ್ಟುತ್ತಾ ಹೇಳಿದರು. “ವೈಜ್ಞಾನಿಕ ಯುಗದ ಬುದ್ಧಿಯನ್ನು ನೀನು ಗೆದ್ದೆ. ಕಾಲವನ್ನು ದಾಟುವ ಬಗೆಯನ್ನು ಕುರಿತು ನಮ್ಮ ಬುದ್ಧಿ ಈತನಕ ಚಿಂತಿಸಿರಲಿಲ್ಲ. ನಿನ್ನ ಕಾಲಯಂತ್ರವನ್ನೊಮ್ಮೆ ನೋಡಬೇಕು.”

“ ಅಗತ್ಯವಾಗಿ ತೋರಿಸಿಕೊಡುವೆನು. ಆದರೆ ನನ್ನ ಯಂತ್ರವನ್ನು ಮಾತ್ರ ನೀವು ಕಸುಗೊಳ್ಳದಿದ್ದರೆ ಸಾಕು. ನನ್ನವರ ನಡುವೆ ಬಾಳಬೇಕೆಂಬ ಆಸೆ ನನಗಿದೆ. ನಿಮ್ಮ ಯುಗವನ್ನು ಅರ್ಥಮಾಡಿಕೊಂಡು ನಿಮ್ಮಂತೆ ಬಾಳಲು ನನಗೆ ಸಾಧ್ಯವಾಗದು. ನಿಮ್ಮ ಸಮಾಜದಲ್ಲಿ ನಾನೊಬ್ಬ ರೋಗಿಯಾದೇನು; ನಿಮ್ಮ ಮನಶ್ಶಾಸ್ತ್ರ ಪಂಡಿತರಿಗೆ ಒಂದು ಸಮಸ್ಯೆಯಾದೇನು. ಆದುದರಿಂದ ನನ್ನ ಯಂತ್ರವನ್ನು ಮಾತ್ರ ಕಸುಗೊಳ್ಳಲು ಹವಣಿಸದಿರಿ.”

“ ಇಲ್ಲ ಅಂತಹ ಸುಲಿಗೆಗೆ ನಾವು ಕೈ ಹಚ್ಚುವುದಿಲ್ಲ. ” ವಿಜ್ಞಾನಿಗಳು ನುಡಿದರು. ಅವರ ನುಡಿಗಳಲ್ಲಿ ಮಾನವನಿಗೆ ಸಹಜವೆನಿಸಿದ ಕನಿಕರ ಅಡಕವಾಗಿತ್ತು. ಯಂತ್ರಗಳ ಒಡನಾಟದಲ್ಲಿ ಯಾಂತ್ರಿಕ ಸಂಸ್ಕಾರವನ್ನು ಹೊಂದಿ ವೈಜ್ಞಾನಿಕ ಯುಗದ ಮನುಷ್ಯನಲ್ಲಿ ದಯೆಯ ಚಿಲುಮೆ ಇನ್ನೂ ಬತ್ತಿ ಬರಡಾಗಿರಲಿಲ್ಲ. ಅವರ ಮಾತುಗಳು ಮುಂದುವರಿದುವು. “ ಇನ್ನೊಬ್ಬರ ಬುದ್ಧಿ ಬಲವನ್ನು ಅರಿಯಬಲ್ಲೆವು; ಹೊಗಳಬಲ್ಲೆವು. ಅಗತ್ಯವಾಗಿ ನಿನ್ನ ಸಮಾಜಕ್ಕೆ ನೀನು ಹಿಂದಿರುಗಬಹುದು. ಆದರೆ ಕಾಲವನ್ನತಿಕ್ರಮಿಸಿ ಬಂದ ನಿನ್ನ

ಕಾಲಯಾನವನ್ನೆಷ್ಟೆ ನೋಡಬೇಕು. ಅದರ ರಚನಾಕ್ರಮವನ್ನೆಷ್ಟೆ ಅರಿಯಬೇಕು. ''

'' ಆಗಲಿ '' ಎಂದೆ ನಾನು. '' ದಿನದ ಅಲೆತದಿಂದ ಬಳಲಿ ಬೆಂಡಾಗಿ ದೇನೆ. ನನಗೆ ಏನಾದರೂ ಒಂದಿನಿಸು ಆಹಾರ ನೀಡಿದರೆ ಉಪಕಾರ ವಾಗುವುದು. ''

'' ಉಪಕಾರವೆಂಬ ಪದವನ್ನು ನಾವು ಉಪಯೋಗಿಸುವುದಿಲ್ಲ. ಈ ಪ್ರಪಂಚದಲ್ಲಿರುವ ಎಲ್ಲಾ ಬಗೆಯ ಸಾಮಗ್ರಿಗಳೂ ಮನುಷ್ಯನ ಹಸಿವೆಯನ್ನು ಕಳೆಯಲೋಸುಗವಾಗಿಯೇ ಇವೆ. '' ವಿಜ್ಞಾನಿಗಳು ವಿತಂತಿಯಿಂದ ಮಾತಾ ಡುವ ಯಂತ್ರವನ್ನು ಕೈಯಲ್ಲಿ ತೆಗೆದುಕೊಂಡರು. '' ಮಾನಸಿಕ ಮತ್ತು ಬೌದ್ಧಿಕ ಪರಿಶೋಧನೆಯ ವಿಭಾಗ. ಮೂರು ಮಂದಿಗೆ ಆಹಾರ. '' ಎಂದು ಸನಿಹದಲ್ಲಿದ್ದ ಭೋಜನ ಶಾಲೆಗೆ ಅಪ್ಪಣೆ ಮಾಡಿದರು. ಅನಂತರ ನನ್ನ ಮೊಗದೆಡೆಗೆ ಕಣ್ಣುಗಳನ್ನು ಹೊರಳಿಸಿದರು. '' ನಮ್ಮ ವೈಜ್ಞಾನಿಕ ಪ್ರಪಂಚದ ಬಗ್ಗೆ ಏನು ಹೇಳುವೆ ? ನೀನು ಹತ್ತು ಶತಮಾನಗಳ ಹಿಂದಿನವನಾದರೂ, ನಿನ್ನ ಬುದ್ಧಿ ನಾಲ್ಕೈದು ಶತಮಾನಗಳಿಗಿಂತ ಹಳೆಯದಲ್ಲ. ನಿನ್ನ ಸಮಾಜ ನಿನ್ನ ಯೋಗ್ಯತೆಯನ್ನರಿವುದೇ ? ನಿನ್ನ ಬುದ್ಧಿಬಲವನ್ನು ನಿನ್ನ ಸಮಾಜ ಸರಿಯಾಗಿ ಉಪಯೋಗಪಡಿಸುವುದೆಂಬದುದು ಸಂದೇಹಾಸ್ಪದ. ನಿನ್ನ ಜನರು ನಿನ್ನನ್ನು ತಲೆತಿರುಕನನ್ನಾಗಿ ಭಾವಿಸಬಹುದು; ಅರೆಮರುಳನೆಂದು ನಿನ್ನನ್ನು ವೈದ್ಯಶಾಲೆಗೆ ಸೇರಿಸಬಹುದು. ''

'' ನನ್ನ ಅದೃಷ್ಟದಿಂದ ಅಂತಹ ಅನುಭವ ನನಗೊದಗಿಲ್ಲ. ನೀವಂದಂತೆ ನನ್ನ ಸಮಾಜ ನನ್ನನ್ನು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ. ''

'' ಬೌದ್ಧಿಕ ಸೀಮೆಯಲ್ಲಿ ನಾವಿಬ್ಬರೂ ಒಡನಾಡಿಗಳು ! ಆಶ್ಚರ್ಯ ! ನಿನ್ನ ಪರಿಚಯ, ನಿನ್ನೊಡನೆ ಆಡಿದ ಮಾತುಕತೆಗಳು ನಿಜವಾಗಿಯೂ ವಿಲಕ್ಷಣವಾದ ಅನುಭವಗಳು. ''

ಅಷ್ಟರಲ್ಲಿಯೇ ಭೋಜನಶಾಲೆಯಿಂದ ಯಾಂತ್ರಿಕ ಮನುಷ್ಯ ಮೂರು ತಟ್ಟೆಗಳಲ್ಲಿ ಆಹಾರವನ್ನು ತೆಗೆದುಕೊಂಡು ಬಂದ; ಮೂವರ ಮುಂದೆಯೂ ತಿನಸುಗಳ ತಟ್ಟೆಗಳನ್ನು ಮುಂದಿರಿಸಿದ. ಆ ತಿನಸುಗಳು ಆವ ಬಗೆಯವೆಂದು ಮರಳಿ ಉಸುರಬೇಕಾಗಿಲ್ಲ. ನಸು ಸಿಹಿಯಾದ ಕೆಂಬಣ್ಣದಕ್ಕೆಗುಳಿಗೆಗಳವು. ಪ್ರತಿಯೊಂದು ತಟ್ಟೆಯಲ್ಲಿಯೂ ಆರಾರು ಗುಳಿಗೆಗಳಿದ್ದುವು. ನಾನು ಒಂದರ

ಅನಂತರ ಇನ್ನೊಂದರಂತೆ ಗುಳಿಗೆಗಳನ್ನು ತೆಗೆದು ಆತುರದಿಂದ ಬಾಯಿಯೊಳಗೆ ಹಾಕಿಕೊಂಡೆ. ಬಾಯಲ್ಲಿರಿಸುವುದೇ ತಡ ಗುಳಿಗೆಗಳು ಕರಗಿ ನೀರಾದುವು.

" ಇದೇನು ಇಷ್ಟು ಆತುರದಿಂದ ನುಂಗುತಿರುವೆಯಲ್ಲ. " ವಿಜ್ಞಾನಿಗಳಂದರು " ಈ ಆಹಾರ ಸಾಮಾನ್ಯವಾದುದಲ್ಲ. ಮೂರು ಮಂದಿಯ ಚೇತನವನ್ನು ಈ ಆಹಾರ ಒದಗಿಸಬಲ್ಲುದು. ಇನ್ನು ಹತ್ತು ನಿಮಿಷಗಳ ಅನಂತರ ನೋಡು. ನಿನ್ನ ದಣಿವೆಲ್ಲಅಳಿದು ದೇಹದಲ್ಲಿ ಮೂರು ಮಂದಿಯ ಹುರುಪುಂಟಾಗುವುದು. "

ಕೆಲ ನಿಮಿಷಗಳಲ್ಲಿಯೇ ನನ್ನ ದೇಹದ ಬಳಲಿಕೆ ಇಲ್ಲವಾಯಿತು. ನನ್ನ ಧಮನಿಗಳಲ್ಲಿ ರಕ್ತ ಹೆಚ್ಚು ವೇಗವಾಗಿ ಪ್ರವಹಿಸುವಂತೆ ತೋರಿತು. ಕಾಲಯಂತ್ರವನ್ನೇರಿ ಒಂದು ಸಾವಿರ ವರುಷಗಳಲ್ಲ, ಹತ್ತು ಸಾವಿರ ವರುಷಗಳನ್ನು ದಾಟಬಹುದೆಂಬ ಹುಮ್ಮಸು ನನಗುಂಟಾಯಿತು.

" ಇನ್ನು ಹೊರಡು. ನಿನ್ನ ಕಾಲಯಂತ್ರವನ್ನು ನೋಡೋಣ. " ವಿಜ್ಞಾನಿಗಳು ತಮ್ಮ ಆಸನದಿಂದ ಎದ್ದರು.

" ಕಾಲಯಂತ್ರವನ್ನು ಬಿಟ್ಟ ಎಡೆ ನನಗೆ ತಿಳಿಯದಲ್ಲ. ಮೀನಾ ನಾನು ಮೊಟ್ಟಮೊದಲು ದೋಣಿಯನ್ನೇರಿದ ಎಡೆಯನ್ನು ತೋರಿಸುವೆಯಾ ? "

" ಹೂಂ. ಆದರೆ ಅದು ಬಹುದೂರ. " ಮೀನಾ ತಲೆಯನ್ನಲುಗಿಸಿದಳು.

" ಅದು ಎಲ್ಲಿಯೇ ಆಗಿರಲಿ. ನೀನು ದಾರಿಯನ್ನು ತೋರಿಸು. " ಎಂದರು ವಿಜ್ಞಾನಿಗಳು. ಎಂದರು ಎನ್ನುವುದರ ಬದಲು ಆಣತಿಗೈದರೆನ್ನುವುದು ಲೇಸು.

ನಾವು ಮರಳಿ ಬೀದಿಗಿಳಿದೆವು. ಬಿಂಗಾವೊಂದನ್ನು ಏರಿ ನಾಲ್ಕಾರು ಕಾಲುವೆಗಳು ಕವಲೊಡೆವ ಕೇಂದ್ರ ಸ್ಥಳವನ್ನು ಸೇರಿದೆವು. ದೋಣಿಯೊಂದು ಅಲ್ಲಿ ಸಂಚಾರಕ್ಕೆ ಸಿದ್ಧವಾಗಿತ್ತು. ಮೀನಾ ಆ ದೋಣಿಯೆಡೆಗೆ ಬೆರಳು ತೋರಿಸಿ ನುಡಿದಳು. " ಅದೇ ಕಾಲುವೆ. ಆ ದೋಣಿಯನ್ನೇರಿದರೆ, ಆ ಎಡೆಯನ್ನು ಸೇರುವೆವು. "

ದೋಣಿಯನ್ನು ಹತ್ತಿದೆವು. ಅದು ಸಾಗಿತು. ಕೆಲ ನಿಮಿಷಗಳಲ್ಲಿಯೇ ನಾವು ಮೊದಲ ದೋಣಿಯನ್ನು ಹತ್ತಿದ ಎಡೆಗೆ ಬಂದು ತಲುಪಿದೆವು

“ ಇಲ್ಲಿಯೇ ದೋಣಿ ಏರಿದುದು ನೀನು. ” ಎಂದು ಮೀನಾ ದಡಕ್ಕೆ ಹಲಗೆಗಳನ್ನು ಜೋಡಿಸಿದುಳ. ನಾವೆಲ್ಲ ಇನ್ನೊಂದು ಚಣದಲ್ಲಿ ದಡವನ್ನು ಸೇರಿದೆವು.

“ ಎಲ್ಲಿ ನಿನ್ನ ಕಾಲಯಂತ್ರ ? ” ಎಂದರು ವಿಜ್ಞಾನಿಗಳು.

“ ಇಗೋ ಇಲ್ಲಿ ಮರೆಸಿರುವೆನು. ” ಎಂದು ಹೇಳುತ್ತಾ ಪಕ್ಕದಲ್ಲಿ ಬೆಳೆದ ಪೊದರನ್ನು ಆರಸಿದೆ. ಕೆಲ ನಿಮಿಷಗಳಲ್ಲಿಯೇ ನನ್ನ ವಾಹನ ಕೈ-ಸೇರಿತು. ಯಾರೂ ಅದರ ಗೋಜಿಗೆ ಬಂದಿರಲಿಲ್ಲ. ನಾನು ಬಿಟ್ಟುಹೋದ ಸ್ಥಿತಿಯಲ್ಲಿಯೇ ಅದಿತ್ತು.

ವಿಜ್ಞಾನಿಗಳು ಕಣ್ಣುಗಳನ್ನಗಲಿಸಿ ಯಂತ್ರವನ್ನು ನೋಡಿದರು. ಅದರ ರಚನಾಕ್ರಮ ಅವರಿಗೆ ತಿಳಿವಾಗಲಿಲ್ಲ. “ ಈ ಯಂತ್ರ ನಿಜವಾಗಿ ಕಾಲವನ್ನು ದಾಟುವುದೇ ? ನೆಲದಮೇಲೆ ಓಡಾಡುವ ಒಂದು ಯಂತ್ರವಂತಿದೆಯಲ್ಲ ! ”

“ ನೆಲದಮೇಲೆ ಓಡಾಡುವ ಯಂತ್ರದ ಮಾದರಿಯನ್ನು ಕಣ್ಣ ಮುಂದಿಟ್ಟುಕೊಂಡೇ ಇದನ್ನು ತಯಾರಿಸಿದೇನೆ. ”

ವಿಜ್ಞಾನಿಗಳು ಬಹು ಸೂಕ್ಷ್ಮವಾಗಿ ಯಂತ್ರವನ್ನು ಪರಿಶೋಧಿಸಿದರು. ಅದರ ಚಿತ್ರವನ್ನು ತೆಗೆದುಕೊಂಡರು; ಅದರ ವಿವಿಧ ಭಾಗಗಳನ್ನು ಗುರುತಿಸಿದರು.

“ ಇದು ಕಾಲಯಂತ್ರ ಹೌದೋ ಅಲ್ಲವೋ ಎಂಬ ಸಂದೇಹವಿದ್ದರೆ ನೀವು ಒಮ್ಮೆ ಈ ವಾಹನವನ್ನೇರಿ ನೋಡಬಹುದು; ಪರೀಕ್ಷಿಸಬಹುದು. ” ಎಂದು ಕಾಲವಾಹನವನ್ನೇರಲು ನಾನು ವಿಜ್ಞಾನಿಗಳನ್ನು ಆಮಂತ್ರಿಸಿದೆ.

“ ಇಲ್ಲ ಇಲ್ಲ. ನೀನು ನಿನ್ನ ಕಾಲಕ್ಕೆ ಮರಳಿ ಯಾತ್ರೆ ಮಾಡು. ನೀನು ಹೋಗುವುದನ್ನು ನಾನು ನೋಡುವೆನು. ” ವಿಜ್ಞಾನಿಗಳು ಬೇರೊಂದು ಕಾಲಕ್ಕೆ ತೆರಳಿ ಅಲ್ಲಿನ ಸಮಾಜವನ್ನು ಇದಿರುಗೊಳ್ಳಲು ಅಂಜಿದರೇನೋ ! ಕಾಲವಾಹನವನ್ನೇರಲು ಅವರು ಒಪ್ಪಲಿಲ್ಲ.

ಕೌತುಕ ಬೆರೆತ ಕಣ್ಣುಗಳಿಂದ ಮೀನಾ ನನ್ನನ್ನು ನಿಟ್ಟಿಸುತಿದ್ದಳು.

“ ಏನು ಮೀನಾ, ನಾನು ಹೋಗಲೇ ? ”

“ ಸಂಗಡ ನನ್ನನ್ನೂ ಕರೆದುಕೊಂಡುಹೋಗಲಾರೆಯಾ ? ” ಆಶೆ ಬೆರೆತ ನೋಟವನ್ನು ಆಕೆ ನನ್ನ ಮೊಗದತ್ತ ಹೊರಳಿಸಿದಳು. ನನ್ನೊಡನೆ ಬರಬೇಕೆಂಬ ಉತ್ಕಟಾಕಾಂಕ್ಷೆ ಆಕೆಯ ಕಣ್ಣುಗಳಲ್ಲಿ ತುಳುಕಾಡುತಿದ್ದಿತು.

" ಇಲ್ಲ ಮೀನಾ. ಇದು ಇನ್ನೊಂದು ನಾಡಿಗೆ ತೆರಳುವುದಲ್ಲ. ಇನ್ನೊಂದು ಕಾಲಕ್ಕೆ ತೆರಳುವುದು. ಅಲ್ಲಿನ ಸಮಸ್ಯೆಗಳನ್ನು, ಅಲ್ಲಿನ ಆಚಾರ ವ್ಯವಹಾರಗಳನ್ನು ನೀನು ಇದುರಿಸಲಾರೆ. ನಾವೆಲ್ಲ ಕಾಡು ಜನರಂತೆ ನಿನ್ನ ಕಣ್ಣುಗಳಿಗೆ ತೋರಬಹುದು. "

ಮೀನಾಳ ಕಣ್ಣುಗಳಿಂದ ಎರಡು ಹನಿ ನೀರು ಉದುರಿದುದನ್ನು ನಾನು ಕಾಣದಿರಲಿಲ್ಲ.

" ನಿನ್ನ ಹೆಸರೇನು? ಇನ್ನೊಮ್ಮೆ ನಮ್ಮ ಬಳಿಗೆ ಮರಳಿ ಬಾ. ಆಗ ನಾವು ಸಾವಿರಗಟ್ಟಲೆ ಕಾಲಯಂತ್ರಗಳನ್ನು ತಯಾರಿಡುವೆವು. ಈಗ ಮನುಷ್ಯರು ಮಂಗಳ ಲೋಕಕ್ಕೆ ಹೋಗಿಬರುವಂತೆ, ಕಾಲವನ್ನು ದಾಟಿ ವಿವಿಧ ಸಂಸ್ಕೃತಿಗಳನ್ನು ಕಣ್ಣಾರೆ ಕಂಡು ಮರಳುವರು. "

" ನನ್ನ ಹೆಸರು ಯಮುನಾಚಾರ್ಯ. ನಿಮಗೆ ವಂದನೆಗಳು. ನಿಮ್ಮ ಹೆಸರನ್ನಾದರೂ ತಿಳಿಸಿ; ಅದನ್ನಾದರೂ ನಮ್ಮ ಜನರೆಡೆಗೆ ಒಯ್ಯುವೆನು. "

" ಪೂರ್ಣೇಂದು. ನಿನ್ನ ಪಯಣ ಗೆಲುವನ್ನು ಪಡೆಯಲಿ. "

ವಿಜ್ಞಾನಿ ಪೂರ್ಣೇಂದುಗಳೂ, ಮೀನಾಳೂ ನೋಡುತಿದ್ದರು. ನಾನು ಕಾಲವಾಹನವನ್ನೇರಿದೆ. ಅದರ ಕೋಲನ್ನು ಹಿಂದಕ್ಕೆಳೆದೆ. ಯಂತ್ರ ಚಲಿಸತೊಡಗಿತು. ಮೀನಾ ಮತ್ತು ವಿಜ್ಞಾನಿಗಳು ನನ್ನ ದೃಷ್ಟಿಯಿಂದ ಮರೆಯಾದರು. ಕಾಲಸಾಗರವನ್ನು ನಾನು ದಾಟತೊಡಗಿದೆ. ಅಲೆಗಳನ್ನು ಒಂದೊಂದಾಗಿ ಅತಿಕ್ರಮಿಸಿ ನಿಮ್ಮ ಬಳಿಗೆ ಬಂದು ತಲುಪಿದೆ. ನೋಡಿ ಈಗ ನಾನು ನಿಮ್ಮ ಮುಂದಿದ್ದೇನೆ.

## ೧೦

ಹೀಗೆ ಯಮುನಾಚಾರ್ಯರು ತಮ್ಮ ಸುದೀರ್ಘವಾದ ಕಾಲ ಪ್ರವಾಸದ ಚರಿತ್ರೆಯನ್ನು ವಿವರಿಸಿ ಹೇಳಿದರು. ನಾವು ಯಾವ ಮಾತನ್ನೂ ಆಡದೆ ಗೊಂಬೆಗಳಂತೆ ಸುಮ್ಮನೆ ಕುಳಿತೆವು. ನನಗಂತೂ ಏನು ಹೇಳಬೇಕೆಂಬುದು ತಿಳಿಯಲಿಲ್ಲ.

" ಏಕೆ ಮಾತಾಡದೆ ಸುಮ್ಮನೆ ಕುಳಿತಿರುವಿರಿ ? " ಆಚಾರ್ಯರೇ ಮಾತಿಗೆ ತೊಡಗಿದರು. " ನನ್ನ ಪ್ರವಾಸದ ಬಗ್ಗೆ ನಿಮ್ಮ ಅಭಿಪ್ರಾಯವೇನು ? "

" ಅದ್ಭುತಕರವಾದುದು. ಸೋಜಿಗದ ಆಗರ ! " ಎಂದೆ ನಾನು.

" ಎಲ್ಲ ಸುಳ್ಳು! ನಿಮ್ಮಿಬ್ಬರಿಗೆ ವಿಸ್ಮಯ ಉಂಟುಮಾಡಲು ನಾನು ಹೂಡಿದ ಕಪಟನಾಟಕವಿದು!" ಆಚಾರ್ಯರು ನಗುತ್ತಾ ಹೇಳಿದರು. " ಆರಂಭದಿಂದ ಹಿಡಿದು ತುದಿಯವರೆಗೆ ಸುಳ್ಳಿನ ಎಸಳುಗಳನ್ನು ಪೋಣಿಸಿದೇನೆ. ನಿಮಗೆ ಆಶ್ಚರ್ಯವನ್ನುಂಟುಮಾಡಬೇಕೆಂದು ಈ ಕತೆಯನ್ನು ನಾನೇ ಕಟ್ಟಿದೆ. ನಾನು ಮರೆಯಾದಂದಿನಿಂದ ಹಿಡಿದು ಮರಳಿ ಬರುವವರೆಗೆ ಈ ಟ್ರೈಸಿಕಲ್ಲಿನೊಡನೆ ಪಕ್ಕದ ಕೋಣೆಯಲ್ಲಿ ಅವಿತುಕೊಂಡಿದ್ದೆ ! ಹೇಗಿದೆ ಈ ನಾಟಕ ? "

" ನಾನು ಮೊದಲೇ ಊಹಿಸಿದ್ದೆ, ನೀವು ಹೇಳಿದುದೆಲ್ಲ ಸುಳ್ಳಿನ ಕಂತೆ ಯೆಂದು. ಆದುದರಿಂದಲೇ ಸುಮ್ಮನೆ ತುಟಿಬಿಚ್ಚದೆ ಕುಳಿದಿದ್ದೆ." ಗೋಪು ಉಸುರಿದ.

" ಅಹುದು ಎಲ್ಲಾ ಸುಳ್ಳು! ನೀನಂದಂತೆ ಸುಳ್ಳು" ಎಂದು ಆಚಾರ್ಯರು ಮರಳಿ ಹೇಳಿದರು. " ನೀವು ಇಲ್ಲೇ ಉಳಿಯುವಿರಾ ? "

" ಇಲ್ಲ. ನಮ್ಮ ಕೋಣೆಗಳಿಗೆ ಹೋಗುವೆವು. " ಎಂದೆ ನಾನು.

" ಸಮಯ ಬಹಳವಾಯಿತು."

ನಾವು ಅಲ್ಲಿಂದೆದ್ದು ಆಚಾರ್ಯರನ್ನು ಬೀಳ್ಕೊಟ್ಟು ಮನೆ ಹಾದಿಯನ್ನು ಹಿಡಿದೆವು.

ದಾರಿಯಲ್ಲಿ ಗೋಪುವನ್ನು ನಾನು ಪ್ರಶ್ನಿಸಿದೆ. " ಆಚಾರ್ಯರ ಕಾಲ ಯಾನದ ಬಗ್ಗೆ ನಿನ್ನ ಅಭಿಪ್ರಾಯವೇನು ? "

" ಅಭಿಪ್ರಾಯವೇನು ಮಣ್ಣು ! ಮನುಷ್ಯನಿಗೆ ತಲೆಕಾದಿದೆಯೆಂದು ನಾನು ಮೊದಲೇ ಊಹಿಸಿದ್ದೆ. ಬೇರಿನ್ನಾರಾದರೂ ಈ ಸುಸಮಯದವರೆಗೆ ಅವಿತುಕೊಂಡು ನಮಗೆಲ್ಲ ದಿಗಿಲುಹುಟ್ಟಿಸುವರೇ ? ಕಡೆಗೊಂದು ಕಟ್ಟುಕತೆ ಯನ್ನು ಹೇಳುವರೇ ? "

" ಅಲ್ಲ, ಆಚಾರ್ಯರೇ ಇದೆಲ್ಲ ಒಂದು ಕಟ್ಟುಕತೆಯೆಂದು ಹೇಳಿದರೂ ನನಗೆ ಪೂರ್ತಿ ನಂಬಿಕೆಯಾಗದು. ಏನೋ ಒಂದು ರಹಸ್ಯವಿರಬೇಕು. "

" ರಹಸ್ಯವಿರುವುದೇನು ಮಣ್ಣು! ಆ ತಲೆತಿರುಕನ ಸಹವಾಸದಿಂದ ನಿನ್ನ ಬುರುಡೆಯ ಆಣಿಯೂ ಸಡಿಲವಾಗಿರಬೇಕು. " ಎಂದು ಗೋಪು ಗುಡುಗಿದ.

ನಾನು ಮಾರ್ನುಡಿಯಲಿಲ್ಲ. ತುಟಿಗಳನ್ನು ಬಿಗಿಹಿಡಿದು ಗೋಪುವನ್ನು ಹಿಂಬಾಲಿಸಿದೆ.

*   *   *   *

ದಿನಗಳು ಏಳು ಉರುಳಿಮವು. ಮರಳಿ ಒಂದು ಭಾನುವಾರ ಬಂದಿತು. ಬಿಡುವು ದಿನವಾದುದರಿಂದ ನನಗೆ ಕೆಲಸಗಳೇನೂ ಇರಲಿಲ್ಲ. ಮಧ್ಯಾಹ್ನದ ಊಟಮುಗಿಸಿದ ಅನಂತರ ನಾನು ಆಚಾರ್ಯರ ಮನೆಕಡೆ ಹೊರಟೆ, ಅವರೊಡನೆ ಹರಟುತ್ತಾ ಹೊತ್ತು ಕಳೆಯೋಣವೆಂದು. ಆದರೆ ಮನೆಯಲ್ಲಿ ಆಚಾರ್ಯರಿರಲಿಲ್ಲ ಭಾನುವಾರವಾದುದರಿಂದ ಅವರಿಗೂ ಬಿಡುವು. ಈ ಬಿರುಬಿಸಿಲಲ್ಲಿ ಎತ್ತ ಹೋದರೆಂದು ನನ್ನ ಬುದ್ಧಿಗೆ ಹೊಳೆಯಲಿಲ್ಲ. ಅಡಿಗೆಯವನನ್ನು ಕರೆದು ಕೇಳಿದೆ.

" ಆಚಾರ್ಯರೆತ್ತ ತೆರಳಿದರು ? "

" ಮನೆಯಲ್ಲಿಯೇ ಇದ್ದರಲ್ಲ; ಅವರು ಆ ದೊಡ್ಡ ಕೋಣೆಯೊಳಗೆ ನುಗ್ಗುವುದನ್ನು ನೋಡಿದೆ. " ಎಂದು ಅವನು ಉತ್ತರಿಸಿದ.

ಆಚಾರ್ಯರು ಅವರ ಪ್ರಯೋಗಶಾಲೆಯೊಳಗೆ ಇರಬಹುದೆಂದು ಎಣಿಸಿದೆ. ಕದಗಳೆರಡೂ ಮುಚ್ಚಿದ್ದುವು. ಆದರೆ ಒಳಗಿನಿಂದ ಅಗಣಿ ಹಾಕಿರಲಿಲ್ಲ ನಾನು ಬಾಗಿಲನ್ನು ದೂಡಿ ಒಳಗೆ ಪ್ರವೇಶಿಸಿದೆ. ಆದರೆ ಕೋಣೆಯಲ್ಲಿ ಅವರಿರಲಿಲ್ಲ. ಅದೂ ತೆರವಾಗಿತ್ತು. ಮೇಜದ ಮೇಲೆ ಕಾಲಯಂತ್ರವೂ ಮಾಯವಾಗಿದ್ದಿತು. ಆಚಾರ್ಯರು ಕಾಲವಾಹನವನ್ನೇರಿ ಮತ್ತೆ ಸಂಚಾರಕ್ಕೆ ಹೊರಟಿರಬಹುದೆಂದು ನಾನು ಭಾವಿಸಿದೆ. ಈಗ ಬಂದಾರು ಎಂದು ಕುರ್ಚಿಯೊಂದರಲ್ಲಿ ಕುಳಿತು ವಾರಪತ್ರಿಕೆಯೊಂದರ ಹಾಳೆಗಳನ್ನು ತಿರುವಿ ಹಾಕತೊಡಗಿದೆ. ಪತ್ರಿಕೆಯ ಹಾಳೆಯೊಂದು ಕೆಳಗೆ ಬಿತ್ತು. ಅದನ್ನು ಎತ್ತಿ ಕೊಳ್ಳಲು ನಾನು ಬಾಗಿದೆ. ಆಗ ನೆಲದಲ್ಲಿ ವಿಚಿತ್ರ ಬಗೆಯ ಹೂವೊಂದ ಕಾಣಸಿಕ್ಕಿತು. ನಾನು ಕೌತುಕದಿಂದ ಹೂವನ್ನೆತ್ತಿಕೊಂಡೆ. ಅದು ಒಣಗಿ ಹೋಗಿತ್ತು. ನೋಡಲು ಗುಲಾಬಿಯಂತಿತ್ತು. ಆದರೆ ಅದರ ಎಸಳುಗಳು ಕೆಂಪು, ನೀಲಿ, ಹಳದಿ, ಬಿಳಿ, ಕಿತ್ತಳೆ ಹೀಗೆ ಬೇರೆ ಬೆರೆ ಬಣ್ಣಗಳಿಂದ ಕೂಡಿದ್ದುವು. ಈ ಬಗೆಯ ಹೂವನ್ನು ಈ ತನಕ ನಾನು ನೋಡಿರಲಿಲ್ಲ ಒಂದು ವಾರದ ಹಿಂದೆ ಆಚಾರ್ಯರು ಹೇಳಿದ ಕಾಲಯಾನದ ನೆನಪಾಯಿತು. " ಶಿಶು ಮಂದಿರದ ಆವರಣದಲ್ಲಿ ಹೂದೋಟವಿತ್ತು. ವಿಜಾತೀಯ ಮಲರು

ಗಳು ತಲ್ಲಿದ್ದುವು. ವಿಜ್ಞಾನಿಗಳು ಸಸ್ಯಪ್ರಪಂಚದಲ್ಲಿ ಎಸಗಿದ ಕ್ರಾಂತಿಯ ಪರಿಣಾಮವಾಗಿ ಹೊಸ ಹೊಸ ಬಗೆಯ ಹೂಗಳು ಮೂಡಿದ್ದುವು. '' ಆಚಾರ್ಯರು ಹೇಳಿದ ಈ ನುಡಿಗಳು ನನ್ನ ಕಿವಿಗಳಲ್ಲಿ ಮಾರುಲಿಗೊಂಡುವು. ಅಹುದು, ಅವರೇ ಈ ಹೂವನ್ನು ಕಿತ್ತು ಜೇಬಿನೊಳಗೆ ಹಾಕಿಕೊಂಡಿರಬೇಕು. ಅವರು ವಿವರಿಸಿದ ಕಾಲಪ್ರವಾಸ ಹುಸಿಯಲ್ಲ. ನಿಜವಾಗಿಯೂ ಅವರು ಭವಿಷ್ಯದ ಬಸಿರನ್ನು ಬಗೆದು ಹೊಕ್ಕಿರಬೇಕು !

ತಾಸುಗಳು ಒಂದೊಂದಾಗಿ ಉರುಳಿದುವು. ಆಚಾರ್ಯರು ಮರಳಿ ಬರಲಿಲ್ಲ. ನನಗೆ ಬೇಸರ ಹಿಡಿದಿತು. ಕೊನೆಗೆ ಕುರ್ಚಿಯಿಂದೆದ್ದು ಅಡಿಗೆಯವನಿಗೆ ಹೇಳಿದೆ. '' ಆಚಾರ್ಯರು ಮರಳಿ ಬಂದರೆ ನಾನು ಬಂದಿದ್ದೆನೆಂದು ತಿಳಿಸು. ''

'' ಹೂಂ, ಆಗಲಿ. '' ಎಂದ ಆತ.

ನಾನು ಮನೆ ಹಾದಿಯನ್ನು ಹಿಡಿದೆ.

ಮರುದಿನ ಬೆಳಗ್ಗೆ ನಾನು ಏಳುವ ಮುನ್ನ ಆಚಾರ್ಯರ ಮನೆಯ ಆಳು ನನ್ನ ಬಳಿಗೆ ಓಡಿ ಬಂದ. ಅವನ ಕಣ್ಣುಗಳಲ್ಲಿ ಭೀತಿಯ ಮತ್ತು ಕೌತುಕದ ಕಣಗಳು ತುಳುಕುತಿದ್ದುವು. '' ಏನಯ್ಯಾ '' ಎಂದೆ ನಾನು.

'' ಆಚಾರ್ಯರು ಕಾಣುವುದಿಲ್ಲ. ನಿನ್ನೆ ಮಧ್ಯಾಹ್ನದ ಮೇಲೆ ಅವರ ಪತ್ತೆಯಿಲ್ಲ. ನೀವು ಎಲ್ಲಾದರೂ ಕಂಡಿರಾ ? '' ಎಂದು ಅವನು ಕೇಳಿದ.

'' ನಾನು ಕಾಣಲಿಲ್ಲ. ತ್ವರಿತದ ಕೆಲಸದ ಮೇಲೆ ಅವರು ಪರವೂರಿಗೆ ಹೋಗಿರಬಹುದು. ''

'' ಹೇಳದೆ ಹೋಗುವರೇ ? '' ಆಳು ಉಸುರಿದ. '' ಅವರ ಸಮಾಚಾರ ನಿಮಗೆ ಗೊತ್ತಿರಬಹುದೆಂದು ನಿಮ್ಮಲ್ಲಿಗೆ ಓಡಿ ಬಂದೆ. ''

'' ನನಗೆ ತಿಳಿಯದು. ಅವರ ಆ ಯಂತ್ರ—ಟ್ರೈಸಿಕಲ್ ಮನೆಯಲ್ಲುಂಟೇ ? ''

'' ಇಲ್ಲ. ಅದೂ ಕಾಣುವುದಿಲ್ಲ. ಆ ಯಂತ್ರದೊಡನೆ ಆಚಾರ್ಯರು ಮಾಯವಾಗಿದಾರೆ. ''

* * * *

ಮೇಲಿನ ಘಟನೆಗಳು ನಡೆದು ಈಗ ಒಂದು ವರುಷ ಕಳೆದುಹೋಗಿದೆ. ಕಾಲನ ಬಸಿರೊಳಗೆ ಆಚಾರ್ಯರು ನುಗ್ಗಿದಾರೆಂಬುದರಲ್ಲಿ ನನಗೆ ಎಳ್ಳಷ್ಟೂ

ಸಂದೇಹವಿಲ್ಲ. ಅವರ ಯಂತ್ರ ಕೆಟ್ಟು ಹೋಗಿ, ಇಲ್ಲವೇ ಬೇರೆಯವರು ಕಸಿದುಕೊಂಡುದರ ಫಲವಾಗಿ, ಅವರು ತಮಗೆ ಅಪರಿಚಿತವಾದ ಒಂದು ಸಮಾಜದಲ್ಲಿ ತೊಳಲಾಡುತ್ತಿರಬಹುದು. ನಮಗಿಂತಲೂ ನಾಗರಿಕರೆನಿಸಿದ ನಮ್ಮ ಮರಿಮಕ್ಕಳ ಬಳಿಗೆ ಅವರು ತೆರಳಿದ್ದರೆ ಅವರ ಪ್ರಾಣಕ್ಕೆ ಅಪಾಯ ವಿರದು; ಹಾಗಲ್ಲ ನಮ್ಮ ಮುತ್ತಾತಂದಿರಾದ ಶಿಲಾಯುಗದ ಮನುಷ್ಯರ ಬಳಿಗೆ ಅವರು ಯಾತ್ರೆ ಗೈದಿದ್ದರೆ! ಮಾನವನಿನ್ನೂ ಮೃಗದ ಮೆಟ್ಟಲಿನಲ್ಲಿಯೇ ಇರುವಂತಹ ಕಾಲಕ್ಕೆ ಅವರು ಗಮಿಸಿದ್ದರೆ! ಆಚಾರ್ಯರ ಪ್ರಾಣಕ್ಕೆ ಆಪತ್ತು ಒದಗದೆ ಇರದು. ಅದನ್ನು ಆಲೋಚಿಸುವಾಗ ನನ್ನ ಮೈ ನವಿರೇಳುತಿದೆ!

ಆಚಾರ್ಯರು ನಮ್ಮಿಂದ ಅಗಲಿ ಒಂದು ವರುಷವಾಯಿತು. ಅವರಿನ್ನು ನಮ್ಮ ಎಡೆಗೆ ಮರಳಿ ಬರುವಂತೆಯೂ ಇಲ್ಲ. ಅವರು ಉಸುರಿದ ಕಾಲ ಯಾನದ ವಿವರಣೆಯನ್ನು ಓದುಗರಿಗೆ ಒಡಿಸುವುದು ಅಗತ್ಯವೆಂದು ನನಗೆ ಅನಿಸಿತು. ಆದುದರಿಂದಲೇ ಆಚಾರ್ಯರು ಹೇಳಿದಂತೆಯೇ ನನ್ನ ನೆನಪಿನಲ್ಲಿರು ವುದನ್ನು ಬರೆದಿದೇನೆ. ಈ ಅದ್ಭುತಕರವಾದ ಕಾಲಪ್ರವಾಸದಲ್ಲಿ ಹುಲೆಷ್ಟು ಸೀರೆಷ್ಟು ಎಂಬುದನ್ನು ಅಳತೆ ಮಾಡುವ ಅಳವು ನನಗಿಲ್ಲ. ಅದನ್ನು ಖಚಿತ ವಾಗಿ ಹೇಳಬಲ್ಲವರೆಂದರೆ ಆಚಾರ್ಯರೊಬ್ಬರೇ ಸರಿ. ಅವರಾದರೊ ಈಗ ನಮ್ಮ ಸಮಾಜವನ್ನೇ ತ್ಯಜಿಸಿ ಕಾಲ ಪುರುಷನ ಹೊಟ್ಟೆಯೊಳಗೆ ನುಗ್ಗಿ, ಅಡಗಿಕೊಂಡಿದಾರೆ.

**ಮುಗಿದುದು.**

ಮುದ್ರಕರು:
ಎ. ಎನ್. ಕಾಮತ
ಹಿಂದಮಾತಾ ಮುದ್ರಣಾಲಯ,
ಧಾರವಾಡ

ಪ್ರಕಾಶಕರು
ಭಾಲಚಂದ್ರ ಘಾಣೇಕರ
ಸಮಾಜ ಪುಸ್ತಕಾಲಯ,
ಧಾರವಾಡ

# ಪ್ರತಿಭಾ ಗ್ರಂಥಮಾಲೆ, ಧಾರವಾಡ



## ಯುಗಾದಿಯಿಂದ ಯುಗಾದಿಗೆ— ಎಂಟು ಪುಸ್ತಕಗಳು.

ಮಾರ್ಚ ೧೯೪೭ಕ್ಕೆ ನಾಲ್ಕನೇ ವರ್ಷಾರಂಭವಾಗಿದೆ. ತ್ವರೆಮಾಡಿರಿ !
ವಾರ್ಷಿಕ ಚಂದಾ ಅಂಚೇವೆಚ್ಚ ಸೇರಿ ೯ ರೂ. ಮಾತ್ರ.
ಮೊದಲನೆಯ ಮೂರು ವರ್ಷದ ಪ್ರಕಟನೆಗಳು

| | | | |
|---|---|---|---|
| ೧ | ಘಾಟೀಮುದುಕ† | ದೇವುಡು | ೧—೮—೦ |
| ೨ | ರಾಜಲಕ್ಷ್ಮಿ† | ಶರತ್ | ೧—೮—೦ |
| ೩ | ಅನ್ನಪೂರ್ಣಾಮಂದಿರ* | ನಿರುಪಮಾದೇವಿ | ೨—೦—೦ |
| ೪-೫ | ಸಾವಿನ ಉಡಿಯಲ್ಲಿ* | ಎನ್ಕೆ | ೩—೦—೦ |
| ೬ | ವೈಕುಂಠನ ಮೃತ್ಯುಪತ್ರ* | ಶರತ್ | ೧—೮—೦ |
| ೭ | ಚಕಮಕಿ† | ಬೇಂದ್ರೆ | ೨—೦—೦ |
| ೮-೯ | ಗಂಡುಹೆಣ್ಣಿನ ಸಮಸ್ಯೆ* | ಕುಪ್ಪಮ್ಮ | ೩—೮—೦ |
| ೧೦ | ಹೆತ್ತ ತಾಯಿ* | ಕಾರಂತ | ೨—೦—೦ |
| ೧೧ | ಭೂಮಾತೆ ಮತ್ತು ಮಂದಿರ* | ಶರತ್-ಪರ್ಲಬಕ್ | ೧—೦—೦ |
| ೧೨-೧೩ | ಬಿರುಗಾಳಿ* | ಪ್ರೊ. ಫಡಕೆ | ೩—೮—೦ |
| ೧೪ | ರಮಾನಾಥ* | ಪ್ರೇಮಚಂದ | ೩—೦—೦ |
| ೧೫ | ಷೋಡಶಿ* | ಶರತ್ | ೨—೦—೦ |
| ೧೬ | ನೇತಾಜಿ | ಮಲ್ಲಾರಿ | ೧—೮—೦ |
| ೧೭ | ವಿಜಯಾ* | ಶರತ್ | ೧—೮—೦ |
| ೧೮ | ರೇಡಿಯೋ ನಾಟಕಗಳು | ಬೀ. ಚಿ. | ೧—೮—೦ |
| ೧೯ | ಸುಭಾಸ ಸೀಮೋಲ್ಲಂಘನ | ಉತ್ತಮಚಂದ | ೧—೮—೦ |
| ೨೦ | ಬೆಳವಲದ ಭಾಗ್ಯಲಕ್ಷ್ಮಿ* | ಕುಲಕರ್ಣಿ | ೨—೮—೦ |
| ೨೧ | ಧರ್ಮಸಂಕಟ* | ಮಾಡೇದ | ೨—೦—೦ |
| ೨೨ | ಸಮ್ರಾಟ್ ಹರ್ಷವರ್ಧನ* | ನಾಗೇಶ | ೨—೦—೦ |
| ೨೩ | ಎರಡು ಸೆಳೆತ* | ವಂದ್ಯೋಪಾಧ್ಯಾಯ | ೧—೧೨—೦ |
| ೨೪ | ಗೃಹದಾಹ† | ಪ್ರೇಮಚಂದ | ೧—೮—೦ |

* ಈ ಗುರುತಿನವು ಕಾದಂಬರಿಗಳು. † ಈ ಗುರುತಿನವು ಕಥಾಸಂಕಲನಗಳು.

**ಆಡಳಿತೆಗಾರರು: ಸಮಾಜ ಪುಸ್ತಕಾಲಯ, ಧಾರವಾಡ**